# ರಮಝಾನ್

## ಬದಲಾವಣೆ ಮತ್ತು ಕ್ರಾಂತಿಯ ತಿಂಗಳು

ಮೌಲಾನಾ ಮುಹಮ್ಮದ್ ಫಾರೂಕ್ ಖಾನ್

ಪರಮ ದಯಾಮಯನೂ ಕೃಪಾಶೀಲನೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಆತ್ಮಸಂಸ್ಕರಣೆ ಮತ್ತು ದೇವಸಂಪ್ರೀತಿಯನ್ನು ಬಯಸಿ ರಮಝಾನ್ ತಿಂಗಳಲ್ಲಿ ಉಪವಾಸ ವ್ರತಾಚರಿಸುವವನ ಗತ ಪಾಪಗಳು ಕ್ಷಮಿಸಲ್ಪಡುವುದು ಎಂದು ಹೇಳಲಾಗಿದೆ. ಅಂದರೆ ಈ ಕ್ಷಮೆ ಮತ್ತು ದೇವ ಸಂಪ್ರೀತಿಯು ಕೇವಲ ಉಪವಾಸ ವ್ರತಾಚರಣೆಯಿಂದ ಆಗಲಾರದು. ಅದರ ಹಿಂದೆ ತನ್ನ ಸಂಸ್ಕರಣೆಯ ಉದ್ದೇಶವೂ ಇರಬೇಕು ಎಂಬ ಶರ್ತವಿದೆ. ಇದುವೇ ಮಾನವನ ಜೀವನ ಬದಲಿಸುವ ಮತ್ತು ಅವನ ಆಲೋಚನೆ–ವ್ಯವಹಾರಗಳಲ್ಲಿ ಕ್ರಾಂತಿ ತರುವ ಉಪಾಧಿಯಾಗಿದೆ.

ಭಾರತದ ಶ್ರೇಷ್ಠ ಇಸ್ಲಾಮೀ ವಿದ್ವಾಂಸರಾದ ಮೌಲಾನಾ ಮುಹಮ್ಮದ್ ಫಾರೂಕ್ ಖಾನ್‌ರವರು 'ರಮ್ಝಾನ್: ತಬ್ದೀಲಿ ಔರ್ ಇಂಕ್ವಿಲಾಬ್ ಕಾ ಮಹೀನಾ' ಎಂಬ ಕೃತಿಯಲ್ಲಿ ರಮಝಾನಿನ ಈ ಕ್ರಾಂತಿಕಾರಿ ಮಗ್ಗುಲಿನ ಬಗ್ಗೆ ಸಂಕ್ಷಿಪ್ತವಾಗಿ ಆದರೆ ಸಮಗ್ರವಾಗಿ ಚರ್ಚಿಸಿದ್ದಾರೆ. ಇದರ ಕನ್ನಡ ರೂಪಾಂತರವೇ ನಿಮ್ಮ ಕೈಯಲ್ಲಿರುವ 'ರಮಝಾನ್: ಬದಲಾವಣೆ ಮತ್ತು ಕ್ರಾಂತಿಯ ತಿಂಗಳು' ಎಂಬ ಈ ಕೃತಿ. ಲೇಖಕ ಮುಹಮ್ಮದ್ ಅಶ್ರಫ್‌ರವರು ಇದನ್ನು ಕನ್ನಡಕ್ಕೆ ಅನುವಾದಿಸಿರುವರು.

ರಮಝಾನಿನ ಆಂತರ್ಯ ಮತ್ತು ಅದರ ಮಹತ್ವ, ಉಪವಾಸ ವ್ರತದ ವ್ಯಾಖ್ಯಾನ ಮತ್ತು ಅದರಿಂದಾಗಬಹುದಾದ ಸಾಮಾಜಿಕ ಬದಲಾವಣೆ ಇತ್ಯಾದಿಗಳಲ್ಲದೆ, ಕೊನೆಯಲ್ಲಿ ಉಪವಾಸ ವ್ರತಾನುಷ್ಠಾನದ ಫಲಶ್ರುತಿಯಾದ ಈದುಲ್ ಫಿತ್ರ್‌ನ ಸಂತೋಷಾಚರಣೆ ಹೇಗಿರಬೇಕೆಂದೂ ಲೇಖಕರು ಮನೋಜ್ಞವಾಗಿ ವಿವರಿಸಿದ್ದಾರೆ. ಪ್ರತಿ ಮನೆಯಲ್ಲೂ ಇರಬೇಕಾದ ಈ ಕಿರು ಕೃತಿಯು ವಾಚಕರ ಮನದಲ್ಲಿ ಆಧ್ಯಾತ್ಮಿಕ ಮತ್ತು ನೈತಿಕವಾದ ಕ್ರಾಂತಿಯನ್ನು ತರಲು ಮತ್ತು ಅವರ ಜೀವನವನ್ನು ಬದಲಿಸಲು ಸಹಾಯಕವಾಗಲಿದೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಮೊದಲ ಮಾತು

ಮಾನವನು ಕೇವಲ ರಕ್ತ-ಮಾಂಸಗಳ ಮುದ್ದೆಯಲ್ಲ. ಬದಲಾಗಿ ಅದಕ್ಕೆ ಭಿನ್ನವಾದಂತಹ ಒಂದು ಅಸ್ತಿತ್ವವನ್ನು ಹೊಂದಿದ್ದಾನೆ ಮತ್ತು ರಕ್ತ-ಮಾಂಸದ ಹೊರತಾಗಿರುವ ಆ ಅಸ್ತಿತ್ವವೇನಿದೆಯೋ ಅದುವೇ ಅಮೂಲ್ಯವಾದುದು. ಆದರೆ ಅಮೂಲ್ಯವಾದುದರ ಕಡೆಗೆ ಬಹಳ ಕಡಿಮೆ ಗಮನ ಹರಿಸಲಾಗುತ್ತದೆ ಮತ್ತು ದೇಹ (ರಕ್ತ-ಮಾಂಸ) ಹಾಗೂ ಅದರ ಅಗತ್ಯಗಳ ರೂಪದಲ್ಲಿ ದೊರೆತಿರುವ ತಾತ್ಕಾಲಿಕ ವಸ್ತುವೇ ನಮ್ಮ ಎಲ್ಲ ಗಮನಗಳ ಕೇಂದ್ರ ಬಿಂದುವಾಗಿರುತ್ತದೆ. ಒಂದರ್ಥದಲ್ಲಿ ಈ ತಾತ್ಕಾಲಿಕ ವಸ್ತು, ನಿಜವಾಗಿ ತಾತ್ಕಾಲಿಕವಾಗಿರದೆ ಅದುವೇ ಶಾಶ್ವತವೋ ಎಂಬಂತಿರುತ್ತದೆ ನಮ್ಮ ವ್ಯವಹಾರ ನೀತಿ. ವಸ್ತುತಃ ಇದು ಮೂಲ ಭೂತವಾದ ಪ್ರಮಾದವಾಗಿದೆ. ಇದರ ಕಾರಣವಾಗಿ ಮಾನವನು ತನ್ನ ಶ್ರೇಷ್ಠನೆಂಬ ಸ್ಥಾನಮಾನದಿಂದ ಕೆಳಗಿಳಿದು ಬಿಡುತ್ತಾನೆ. “ನಾವು ಮಾನವನನ್ನು ಅತ್ಯುತ್ತಮ ಪ್ರಕೃತಿಯಲ್ಲಿ ಸೃಷ್ಟಿಸಿರುತ್ತೇವೆ” ಎಂದು ಅಲ್ಲಾಹ್ ಹೇಳಿರುವನು. ಈ ಅಮೂಲ್ಯವಾದ ಮತ್ತು ಉನ್ನತವಾದ ವಸ್ತುವನ್ನು ಬೇರಾರಿಂದಲೂ ಕಲ್ಪಿಸಲು ಸಾಧ್ಯವಿಲ್ಲ. ಈ ಉತ್ತಮ ಪ್ರಕೃತಿಯು ವಿಶೇಷವಾಗಿ ಮಾನವೀಯ ಆತ್ಮ ಮತ್ತು ಅವನ ಚಾರಿತ್ರ್ಯಕ್ಕೆ ಸಂಬಂಧಿಸಿದೆ. ಮಾನವನ ಕಲ್ಪನೆಗಳು, ಭಾವನೆಗಳು, ಘನ ಉದ್ದೇಶ ಮತ್ತು ಇರಾದೆಗಳು ಸರಿ ಹಾಗೂ ಉನ್ನತವಾಗಿಲ್ಲದಿದ್ದರೆ ವಾಸ್ತವಿಕತೆಯ ದೃಷ್ಟಿಯಲ್ಲಿ ಅದಕ್ಕೆ ಯಾವುದೇ ಮೌಲ್ಯವಿರುವುದಿಲ್ಲ.

ಜೀವನದ ಈ ಮಗ್ಗುಲು ಮೂಲಭೂತ ಮಹತ್ವವನ್ನು ಹೊಂದಿದೆ. ಇದನ್ನು ಕಡೆಗಣಿಸುವುದು ವಸ್ತುತಃ ಯಾವುದೇ ಅಕ್ರಮಕ್ಕಿಂತ ಕಡಿಮೆಯೇನಲ್ಲ. ನಾವು ಏನು ಮತ್ತು ಏನಲ್ಲ, ನಾವು ಏನಾಗಬೇಕಿತ್ತು ಮತ್ತು ಏನಾಗಿದ್ದೇವೆ... ಇದು ಕೇವಲ ಅಧ್ಯಯನ ಮತ್ತು ಮಾತುಗಳಿಗೆ ಸೀಮಿತವಾದ ವಿಷಯಗಳಲ್ಲ. ಅದಕ್ಕಾಗಿ ಪ್ರಾಯೋಗಿಕ ಕಾರ್ಯಕ್ರಮವನ್ನು ಆಯೋಜಿಸಬೇಕಾದುದು ಅಗತ್ಯ. ಈ ಮೂಲಕ ಪ್ರಸ್ತುತ ವಿಷಯದ ಕುರಿತಾದ ಕಲ್ಪನೆಗಳು ಮತ್ತು ಚಿಂತನೆಗಳು

ನಮ್ಮ ಜೀವನದಲ್ಲಿ ವ್ಯಕ್ತವಾಗುವಂತಾಗಬೇಕು. ಇದೇ ಉದ್ದೇಶವನ್ನು ಗಳಿಸಲಿಕ್ಕಾಗಿ ವರ್ಷದಲ್ಲಿ ಒಂದು ತಿಂಗಳು ಅಂದರೆ ರಮಝಾನ್ ತಿಂಗಳನ್ನು ಆಯ್ದುಕೊಳ್ಳಲಾಗಿದೆ. ಈ ತಿಂಗಳೊಂದಿಗೆ ಪವಿತ್ರ ಕುರ್‌ಆನಿನ ವಿಶೇಷ ಸಂಬಂಧವೂ ಇದೆ ಮತ್ತು ರಮಝಾನ್‌ನ ಉಪವಾಸ ವ್ರತದ ಉದ್ದೇಶವೇ ಪವಿತ್ರ ಕುರ್‌ಆನಿನ ಉದ್ದೇಶವಾಗಿದೆ. ಅದನ್ನು ತಕ್ವಾದೊಂದಿಗೆ ಕಲ್ಪಿಸಲಾಗಿದೆ. 'ತಕ್ವಾ' ಎಂಬುದು ಒಂದು ಸಮಗ್ರ ಪಾರಿಭಾಷಿಕವಾಗಿದೆ. ಅದರ ಸಂಬಂಧವು ಚಿಂತನೆ, ವರ್ತನೆ, ಕರ್ಮ ಎಲ್ಲದರೊಂದಿಗೂ ಇದೆ. ಅದು ಜೀವನದ ಪ್ರಜ್ಞೆಯೂ ಆಗಿದೆ, ವಾಸ್ತವಿಕತೆಯ ಪ್ರಜ್ಞೆಯೂ ಆಗಿದೆ ಮತ್ತು ದೇವಪ್ರಜ್ಞೆಯೂ ಆಗಿದೆ.

ಉಪವಾಸ ವ್ರತ ಮತ್ತು ರಮಝಾನ್‌ಗೆ ಸಂಬಂಧಿಸಿ ನನ್ನ ವಿವಿಧ ಲೇಖನಗಳನ್ನು ಮಾನ್ಯ ಅಬುಲ್ ಆಲಾ ಸಯ್ಯಿದ್ ಸುಬ್ಹಾನಿಯವರು ಮಾನ್ಯ ಮಾಡಿರುವರಲ್ಲದೆ, ಅವುಗಳನ್ನು ಕ್ರೋಢೀಕರಿಸಿ, ಆಸಕ್ತರಿಗೆ ಉಪಯುಕ್ತವಾಗಲಿ ಎಂದು ಅದಕ್ಕೆ ಪುಸ್ತಕದ ರೂಪ ನೀಡಿದ್ದಾರೆ.

**ಮುಹಮ್ಮದ್ ಫಾರೂಕ್ ಖಾನ್**

# ರಮಝಾನ್‌ಗೆ ಸ್ವಾಗತ

ರಮಝಾನ್ ತಿಂಗಳು ಆಗತವಾಗುತ್ತಲೇ ವಾತಾವರಣದಲ್ಲಿ ಒಂದು ಆನಂದದ ಅಲೆ ತೇಲಾಡುತ್ತದೆ. ವಾಸ್ತವದಲ್ಲಿ ಇದು ಒಳಿತುಗಳ ವಸಂತ ಮಾಸ ವಾಗಿದೆ. ಇದು ನಮ್ಮ ತರಬೇತಿಗಾಗಿ ಆಗತವಾಗುತ್ತದೆ. ಈ ತಿಂಗಳಲ್ಲಿ ತನ್ನ ತರಬೇತಿಯ ಕಡೆಗೆ ಸಂಪೂರ್ಣ ಗಮನ ಹರಿಸಿದಲ್ಲಿ, ಅದರ ಉತ್ತಮ ಪ್ರಭಾವಗಳು ವರ್ಷವಿಡೀ ಉಳಿದಿರುವುದು.

ಈ ಲೋಕದಲ್ಲಿ ಮಾನವನಿಗೆ ದಾರಿತಪ್ಪಲು ಮತ್ತು ಸ್ವೇಚ್ಛೆಯನ್ನು ಅನುಸರಿಸಲು ಎಲ್ಲೆಡೆ ಅವಕಾಶಗಳು ಸಿಗುತ್ತವೆ. ಆದ್ದರಿಂದ ವ್ಯಕ್ತಿಯು ತನ್ನ ತರಬೇತಿ ಮತ್ತು ಚಾರಿತ್ರ್ಯ ನಿರ್ಮಾಣದ ಕಡೆಗೆ ವಿಶೇಷ ಗಮನ ಹರಿಸಬೇಕಾದ ಅಗತ್ಯ ಬಹಳವಿದೆ. ಈ ನಿಟ್ಟಿನಲ್ಲಿ ಯಾವತ್ತಿಗೂ ಅಲಕ್ಷ್ಯನಾಗಿರಬಾರದು. ಈ ತರಬೇತಿಯ ಮಹತ್ವವನ್ನು ದೃಷ್ಟಿಯಲ್ಲಿರಿಸಿಯೇ ಅಲ್ಲಾಹನು ರಮಝಾನ್‌ನ ಇಡೀ ತಿಂಗಳನ್ನು ಅದಕ್ಕಾಗಿ ಮೀಸಲಿರಿಸಿದ್ದಾನೆ. ಅಲ್ಲಾಹ್ ಹೇಳುತ್ತಾನೆ, "ಓ ಸತ್ಯವಿಶ್ವಾಸಿಗಳೇ, ಗತ ಪ್ರವಾದಿಗಳ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದ್ದಂತೆಯೇ ನಿಮ್ಮ ಮೇಲೆ ಉಪವಾಸ ವ್ರತವನ್ನು ಕಡ್ಡಾಯಗೊಳಿಸಲಾಗಿದೆ. ಇದರಿಂದ ನಿಮ್ಮಲ್ಲಿ ಧರ್ಮನಿಷ್ಠೆಯ ಗುಣವಿಶೇಷ ವುಂಟಾಗುವುದೆಂದು ಆಶಿಸಲಾಗಿದೆ." (ಅಲ್ ಬಕರ: 183)

ಕುರ್‌ಆನ್‌ಗಿಂತ ಮುಂಚೆಯೂ ಜನರ ಮೇಲೆ ಉಪವಾಸ ವ್ರತವನ್ನು ಕಡ್ಡಾಯಗೊಳಿಸಲಾಗಿತ್ತು ಎಂದು ಇದರಿಂದ ತಿಳಿದು ಬರುತ್ತದೆ. ಈ ಉಪವಾಸ ವ್ರತವು ಒಂದು ಪವಿತ್ರ ಆರಾಧನೆಯಾಗಿರುವಂತೆಯೇ ನಮ್ಮ ನೈತಿಕ ಮತ್ತು ಆಧ್ಯಾತ್ಮಿಕ ತರಬೇತಿಯ ಅತ್ಯುತ್ತಮ ಮಾಧ್ಯಮವೂ ಆಗಿದೆ.

ನಮ್ಮಲ್ಲಿ ತಕ್ವಾದ (ದೇವನಿಷ್ಠೆಯ) ಗುಣ ವಿಶೇಷವು ಬೆಳೆಯಬೇಕು, ನಾವು ಲಂಗುಲಗಾಮಿಲ್ಲದೆ ಜೀವನ ಸಾಗಿಸಬಾರದು, ಅಲ್ಲಾಹನ ಮಹಾನತೆಯು ನಮ್ಮ ದೃಷ್ಟಿಯಲ್ಲಿರಬೇಕು, ನಾವು ಸ್ವಯಂ ಹೊಣೆಗೇಡಿಗಳಾಗಬಾರದು, ಅಲ್ಲಾಹನ

ಮುಂದೆ ಉತ್ತರದಾಯಿಗಳೆಂಬ ಪ್ರಜ್ಞೆಯನ್ನು ಬೆಳೆಸಬೇಕು, ಜೀವನದ ಯಾವುದೇ ವ್ಯವಹಾರದಲ್ಲಿಯೂ ತಪ್ಪು-ಅನ್ಯಾಯ-ಅಕ್ರಮದಿಂದ ಕೂಡಿದ ವ್ಯವಹಾರವನ್ನು ತಳೆಯಬಾರದೆಂಬುದೇ ಉಪವಾಸ ವ್ರತದ ಉದ್ದೇಶವಾಗಿದೆ. ಮುತ್ತಕೀಯ ಉದ್ದೇಶವು ದೇವಪ್ರಜ್ಞೆಯಾಗಿದೆ. ಅಂದರೆ ಅವನ ಹೃದಯವು ಯಾವ ಸ್ಥಿತಿ ಯಲ್ಲಿಯೂ ತನ್ನ ಸೃಷ್ಟಿಕರ್ತನಾದ ಪಾಲಕ ಪ್ರಭುವಿನ ಸ್ಮರಣೆಯಿಂದ ಮುಕ್ತವಾಗಿರು ವುದಿಲ್ಲ; ಬದಲಾಗಿ ಈ ಸ್ಮರಣೆ ಮತ್ತು ಪ್ರಜ್ಞೆಯು ನಿರಂತರ ಹೆಚ್ಚುತ್ತಿರುತ್ತದೆ.

ವ್ಯಕ್ತಿಯು ತನ್ನ ಜೀವನದಲ್ಲಿ ಯಾವುದಾದರೂ ಒಳ್ಳೆಯ ಅಥವಾ ಕೆಟ್ಟ ಪಾತ್ರವನ್ನು ಖಂಡಿತವಾಗಿಯೂ ನಿರ್ವಹಿಸುತ್ತಾನೆ. ನಮ್ಮ ಜೀವನವು ಎಂತಹ ಪಾತ್ರವನ್ನು ಹೊಂದಿರಬೇಕು ಮತ್ತು ನಮ್ಮ ಚಾರಿತ್ರ್ಯವು ಹೇಗಿರಬೇಕು ಎಂಬುದರ ಕುರಿತು ಪವಿತ್ರ ಕುರ್‌ಆನ್ ಸಂಪೂರ್ಣ ಮಾರ್ಗದರ್ಶನವನ್ನೀಯುತ್ತದೆ. ಉನ್ನತ ಚಾರಿತ್ರ್ಯದ ಹೊರತು ಪರಿಪೂರ್ಣ ವ್ಯಕ್ತಿತ್ವದ ನಿರ್ಮಾಣವು (Perfection of Personality) ಅಸಾಧ್ಯ. ವ್ಯಕ್ತಿತ್ವದ ಪರಿಪೂರ್ಣತೆ ಅಥವಾ ಆತ್ಮದ ಬೆಳವಣಿಗೆಯೇ ಧರ್ಮದ ಶಿಕ್ಷಣ ಮತ್ತು ಶರೀಅತ್‌ನ ಆದೇಶಗಳ ಮೂಲ ಉದ್ದೇಶವಾಗಿದೆ. ಇದನ್ನೇ ಪವಿತ್ರ ಕುರ್‌ಆನ್ ಆತ್ಮಸಂಸ್ಕರಣೆ ಎಂದು ಬಣ್ಣಿಸಿದೆ. ಮಾತ್ರವಲ್ಲ, ದೇವವಾಣಿಯ ಪಠಣ ಮತ್ತು ಆದೇಶ-ಯುಕ್ತಿಗಳ ಶಿಕ್ಷಣದ ಮೂಲಕ ಜನರನ್ನು ಸಂಸ್ಕರಿಸುವುದೇ ಪ್ರವಾದಿವರ್ಯರ(ಸ) ಹೊಣೆಗಾರಿಕೆಯಾಗಿದೆ ಎಂದೂ ಅದು ಹೇಳಿದೆ. ಅಂದರೆ ಜನರ ವ್ಯಕ್ತಿತ್ವವನ್ನು ಸುಧಾರಿಸುವುದು ಮತ್ತು ಅದರಲ್ಲಿ ಬೆಳವಣಿಗೆಯನ್ನುಂಟು ಮಾಡುವುದು. ಸ್ವಯಂ ಅಲ್ಲಾಹನ ಸಂದೇಶವಾಹಕರು(ಸ) ಸ್ಪಷ್ಟವಾಗಿ ಈ ರೀತಿ ಹೇಳಿರುವರು, "ನಾನು ಚಾರಿತ್ರ್ಯವನ್ನು ಉನ್ನತ ಮಟ್ಟಕ್ಕೆ ತಲುಪಿಸಲೆಂದೇ ಕಳುಹಿಸಲ್ಪಟ್ಟಿರುವೆನು." (ಬೈಹಕೀ)

ಜೀವನದಲ್ಲಿ ಭೌತಿಕತೆ ಮತ್ತು ಭೌತಿಕ ಲಾಭವೇ ಸರ್ವಸ್ವವಲ್ಲ. ಬದಲಾಗಿ ಆ ಎಲ್ಲ ಭೌತಿಕ ಅಗತ್ಯದ ವಸ್ತುಗಳನ್ನು ಒದಗಿಸಿದ ಅಲ್ಲಾಹನ ಸಂತುಷ್ಟಿಯೇ ಮೂಲಭೂತ ಉದ್ದೇಶವಾಗಿದೆ ಎಂಬುದನ್ನು ಅರಿಯುವ ತನಕ ವ್ಯಕ್ತಿಯು ಚಾರಿತ್ರ್ಯದ ಉನ್ನತ ಮಟ್ಟಕ್ಕೆ ತಲುಪಲಾರನು. ಆದರೆ ನಾವು ಕೆಲವು ದಿನಗಳ ಭೋಗಕ್ಕೆ ಮಹತ್ವ ನೀಡುವ ಭರದಲ್ಲಿ ಜೀವನದ ಉನ್ನತ ವಾಸ್ತವಿಕತೆಗಳನ್ನೂ ಅದರ ಉನ್ನತವಾದ ಅಗತ್ಯಗಳನ್ನೂ ಸಂಪೂರ್ಣವಾಗಿ ಕಡೆಗಣಿಸುವುದು ಅಲ್ಲಾಹ ನಿಗೆ ಇಷ್ಟವಿಲ್ಲ.

ಉಪವಾಸ ವ್ರತದ ಸ್ಥಿತಿಯಲ್ಲಿ ವ್ಯಕ್ತಿಯು ಪ್ರಭಾತದಿಂದ ಪ್ರದೋಷದ ತನಕ ಆಹಾರ, ಪಾನೀಯ ಸೇವನೆ ಮತ್ತು ಕಾಮೇಚ್ಛೆಯ ಈಡೇರಿಕೆಯಿಂದ ತನ್ನನ್ನು

ತಡೆದಿರಿಸಿಕೊಳ್ಳುತ್ತಾನೆ. ಆದರೆ ಆಧ್ಯಾತ್ಮಿಕವಾಗಿ ಉಪವಾಸ ವ್ರತ ಎಂದರೆ, ಲೋಕಾರಾಧಕರು ಕಾಣಲು ಶಕ್ತವಾಗಿಲ್ಲದಂತಹ ವಾಸ್ತವಗಳನ್ನು ನೋಡುವುದಾಗಿದೆ. ಅವನಿಗೆ ತನ್ನ ಆಗ್ರಹಗಳ ಮೇಲೆ ನಿಯಂತ್ರಣವಿರಬೇಕು. ಉಪವಾಸ ವ್ರತಕ್ಕೆ ಅರಬಿಯಲ್ಲಿ 'ಸೌಮ್' ಎಂಬ ಪದವನ್ನು ಬಳಸಲಾಗಿದೆ. ಸೌಮ್‌ನ ಮೂಲಾರ್ಥ ತಡೆದಿರಿಸುವುದು ಎಂದಾಗಿದೆ. ನಿಂತು ಹೋಗಿರುವ ಗಾಳಿ ಮತ್ತು ಮಧ್ಯಾಹ್ನದ ಸಮಯಕ್ಕೂ 'ಸೌಮ್' ಎನ್ನಲಾಗುತ್ತದೆ. ಸೂರ್ಯನು ನಡು ಮಧ್ಯಾಹ್ನದ ವೇಳೆ ಆಕಾಶದಲ್ಲಿ ನಿಂತು ಹೋಗುತ್ತಾನೆ ಎಂಬ ಕಲ್ಪನೆಯಿದೆ. ಆ ಅರ್ಥದಲ್ಲಿ ಪ್ರಸ್ತುತ ಪದವನ್ನು ಬಳಸಲಾಗುತ್ತದೆ. ವ್ಯಕ್ತಿಯು ಉಪವಾಸಿಗನಾಗಿರುತ್ತಾ ಆಹಾರ ಪಾನೀಯ ಸೇವನೆ ಮತ್ತು ಕಾಮೇಚ್ಛೆಯನ್ನು ನಿಯಂತ್ರಿಸುವುದು ಮಾತ್ರ ಉಪವಾಸ ವ್ರತದ ಉದ್ದೇಶವಾಗಿರುವುದಲ್ಲ; ತಿನ್ನುವ ಮತ್ತು ಕುಡಿಯುವುದರಿಂದ ಕೇವಲ ಉಪವಾಸದ ಸ್ಥಿತಿಯಲ್ಲಿ ದೂರವಿರಬೇಕಷ್ಟೇ, ಆದರೆ ಪಾಪಕಾರ್ಯ ಮತ್ತು ಅಪ್ರಿಯ ವ್ಯವಹಾರ ಗಳಿಂದ ಸದಾ ದೂರವಿರಬೇಕಾಗಿದೆ. ಹಸಿವು, ದಾಹ ಮತ್ತು ಕಾಮೇಚ್ಛೆಯೇನೂ ಅಪ್ರಿಯ ಆಗ್ರಹಗಳಲ್ಲ. ಈ ಆಗ್ರಹ ಮತ್ತು ಇಚ್ಛೆಗಳನ್ನು ಅಲ್ಲಾಹನು ಸ್ವಯಂ ಮಾನವನಲ್ಲಿರಿಸಿದ್ದಾನೆ. ವಸ್ತುತಃ ಅವುಗಳನ್ನು ಅಳಿಸಿ ಹಾಕುವುದು ಉದ್ದೇಶವಲ್ಲ; ಬದಲಾಗಿ ಅವುಗಳನ್ನು ಅನಿಯಂತ್ರಿತವಾಗಿರಿಸದೆ, ಅವುಗಳನ್ನು ಮೇರೆ ಮತ್ತು ನೀತಿಗಳಿಗೆ ಅಧೀನವಾಗಿರಿಸಬೇಕು ಎಂಬುದೇ ಉದ್ದೇಶವಾಗಿದೆ. ಅನ್ಯಥಾ ಸಮಾಜವು ಕ್ಷೋಭೆಗಳಿಂದ ತುಂಬಿಕೊಳ್ಳುವುದು ಮತ್ತು ಮಾನವನು ಸ್ವಯಂ ತನ್ನ ಮೌಲ್ಯವನ್ನು ಕಡೆಗಣಿಸತೊಡಗುವನು.

ಉಪವಾಸದ ಸ್ಥಿತಿಯಲ್ಲಿ ವ್ಯಕ್ತಿಯು ಧರ್ಮಸಮ್ಮತ ಆಹಾರವನ್ನೂ ತಿನ್ನುವುದಿಲ್ಲ, ಸಾಮಾನ್ಯ ಸ್ಥಿತಿಯಲ್ಲಿ ಅಂತಹ ಆಹಾರವನ್ನು ತಿನ್ನಬಹುದು, ಆದರೆ ಅದು ನಿಷಿದ್ಧ ಸಂಪಾದನೆಯ ಆಹಾರವಾಗಿರಬಾರದು. ಅವನಲ್ಲಿ ಶಕ್ತಿಯಿರಬೇಕು ಆದರೆ ಅದು ಜೀವನದ ಭೋಗಾಸಕ್ತಿಗೆ ಅರ್ಪಿತವಾಗಿ ಹೋಗಬಾರದು. ಬಾಯಿಯಲ್ಲಿ ನಾಲಗೆ ಇರಬೇಕು ಆದರೆ ಅದು ಸುಳ್ಳು ಮಾತುಗಳನ್ನಾಡಬಾರದು. ಅವನಿಗೆ ಕಣ್ಣುಗಳಿರಬೇಕು ಆದರೆ ಅದು ಕರ್ಮಶುದ್ಧವಾಗಿರಬೇಕು. ಜೀವನದಿಂದ ಪಲಾಯನ ಮಾಡಬಾರದು ಆದರೆ ಅವನ ಜೀವನವು ಪಾವಿತ್ರ್ಯತೆಗೆ ಹಿಡಿದ ಕನ್ನಡಿಯಾಗಿರಬೇಕು.

ಜೀವನವು ಕೇವಲ ದೈಹಿಕ ಅಗತ್ಯಗಳಿಗಷ್ಟೇ ಸೀಮಿತವಾಗಿಲ್ಲ, ಬದಲಾಗಿ ನಮ್ಮ ಗಮನಕ್ಕೆ ಅರ್ಹವಾಗಿರುವಂತಹ ಅನೇಕ ವಸ್ತುಗಳು ಜೀವನದಲ್ಲಿ ಇವೆ ಎಂಬುದನ್ನು ಉಪವಾಸ ವ್ರತವು ತಿಳಿಸಿಕೊಡುತ್ತದೆ. ಉಪವಾಸವು ವ್ಯಕ್ತಿಯನ್ನು ಅಲ್ಲಾಹನೆಡೆಗೆ ಮತ್ತು ಜೀವನದ ಉನ್ನತ ಉದ್ದೇಶ ಹಾಗೂ ಉನ್ನತ ಅವಸ್ಥೆ

ಯೆಡೆಗೆ ಕೊಂಡೊಯ್ಯುತ್ತದೆ. ಅವುಗಳನ್ನು ಗಳಿಸದೆ ಹೋದರೆ, ಸಾಮಾನ್ಯ ಪ್ರಾಣಿಗಳು ಮತ್ತು ಮಾನವರ ನಡುವಿನ ನೈಜ ವ್ಯತ್ಯಾಸವು ಉಳಿಯಲಾರದು.

ಉಪವಾಸಿಗನು ಒಂದು ರೀತಿಯಲ್ಲಿ ತನ್ನನ್ನು ಅಲ್ಲಾಹನಿಗಾಗಿ ಹೆಚ್ಚೆಚ್ಚು ಬಿಡುವು ಮಾಡಿಕೊಳ್ಳುತ್ತಾನೆ. ಅವನು ಪರಿಪೂರ್ಣವಾಗಿ ಅಲ್ಲಾಹನೆಡೆಗೆ ಗಮನ ಕೇಂದ್ರೀಕರಿಸಲು ಪ್ರಯತ್ನಿಸುತ್ತಾನೆ. ಈ ನಿಟ್ಟಿನಲ್ಲಿ ಇಅ್‌ತಿಕಾಫ್ (ತಪಶ್ಚರ್ಯೆ) ಮತ್ತು ಉಪವಾಸದ ನಡುವೆ ಬಹಳ ಅನುರೂಪತೆ ಮತ್ತು ಸಮಾನತೆಯು ಕಂಡುಬರುತ್ತದೆ. ಆದ್ದರಿಂದಲೇ ರಮಝಾನಿನ ಕೊನೆಯ ದಿನಗಳಲ್ಲಿ ಇಅ್‌ತಿಕಾಫನ್ನು ಇಷ್ಟಪಡಲಾಗಿದೆ. ಸ್ವತಃ ಅಲ್ಲಾಹನ ಸಂದೇಶವಾಹಕರು(ಸ) ರಮಝಾನಿನ ಕೊನೆಯ ಹತ್ತು ದಿನಗಳಲ್ಲಿ ಇಅ್‌ತಿಕಾಫ್ ಆಚರಿಸುತ್ತಿದ್ದರು.

ತರುವಾಯ, ಉಪವಾಸದ ಮೂಲಕ ವ್ಯಕ್ತಿಯಲ್ಲಿ ಒಂದು ವಿಶೇಷವಾದ ಗುಣವು ಬೆಳೆದು ಬರುತ್ತದೆ. ಅದನ್ನು ನಾವು ಸಹನೆ, ಸಂಯಮ ಎಂದು ಮುಂತಾಗಿ ಗುರುತಿಸುತ್ತೇವೆ. ಈ ಗುಣದ ಹೊರತು ಉನ್ನತ ಚಾರಿತ್ರ್ಯವನ್ನು ಕಲ್ಪಿಸಲು ಸಾಧ್ಯವೂ ಇಲ್ಲ, ಅದರ ಹೊರತು ಜಗತ್ತಿನಲ್ಲಿ ದೊಡ್ಡ ಸಾಧನೆ ಗೈಯುವತೆಯೂ ಇಲ್ಲ. ರಮಝಾನಿನಲ್ಲಿ ಒಂದು ತಿಂಗಳ ಕಾಲ ನಿರಂತರವಾಗಿ ಸಹನೆ, ಸಂಯಮ ಮತ್ತು ಅಲ್ಲಾಹನ ಅನುಸರಣೆಯ ಪ್ರಾಯೋಗಿಕ ಅಭ್ಯಾಸವನ್ನು ಮಾಡಿಸಲಾಗುತ್ತದೆ. ಆದ್ದರಿಂದಲೇ ಅಲ್ಲಾಹನ ಸಂದೇಶವಾಹಕರು(ಸ) ರಮಝಾನನ್ನು 'ಹುವ ಶಹ್ರುಸ್ಸಬ್ರ್' (ಬೈಹಕೀ) ಎಂದು ಹೇಳಿದ್ದಾರೆ. ಅಂದರೆ 'ಅದು ಸಹನೆಯ ಮಾಸವಾಗಿದೆ.'

ಉಪವಾಸ ವ್ರತವು ನಮಗೆ ಬಡವರ ಸಂಕಷ್ಟ ಮತ್ತು ಅವರ ಹಸಿವು, ಅಸಹಾಯಕತೆಯ ಅನುಭವವನ್ನು ದೊರಕಿಸಿ ಕೊಡುತ್ತದೆ. ಅಂತೆಯೇ ಯಾರನ್ನೂ ಸಂಕಷ್ಟದ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟು ಬಿಡದಿರಲು, ಅವಶ್ಯಾರ್ಥಿಗಳ ಜತೆ ಸಹಾನುಭೂತಿಯಿಂದ ವ್ಯವಹರಿಸಲು, ದುಃಖಿತರ ದುಃಖ-ದುಮ್ಮಾನವನ್ನು ದೂರೀಕರಿಸುವುದು ನಮ್ಮ ಕರ್ತವ್ಯವಾಗಿದೆ ಎಂದು ಭಾವಿಸಲು ಉಪವಾಸವು ನಮ್ಮನ್ನು ಪ್ರೇರೇಪಿಸುತ್ತದೆ. ಆದ್ದರಿಂದಲೇ ರಮಝಾನಿನ ಕುರಿತಾಗಿ ಅಲ್ಲಾಹನ ಸಂದೇಶವಾಹಕರು(ಸ) 'ಹುವ ಶಹ್ರುಲ್ ಮುವಾಸಾತ್' (ಬೈಹಕೀ) ಎಂದು ಹೇಳಿದ್ದಾರೆ. ಅಂದರೆ 'ಅದು ಸಹಾನುಭೂತಿಯ ತಿಂಗಳಾಗಿದೆ.'

ಉಪವಾಸ ವ್ರತವು ಕೃತಜ್ಞತೆಯ ಪ್ರಕಟನೆಯೂ ಆಗಿದೆ. ವ್ಯಕ್ತಿಯು ಉಪವಾಸ ವ್ರತಾಚರಿಸುವ ಮೂಲಕ ಅಲ್ಲಾಹನನ್ನು ಕಡೆಗಣಿಸಲು ಸಾಧ್ಯವಿಲ್ಲ ಎಂಬುದನ್ನು ವ್ಯಕ್ತಪಡಿಸುತ್ತಾನೆ. ಅವನು ಜಗತ್ತಿನ ಎಲ್ಲ ಸುಖಗಳನ್ನೂ ಕಡೆಗಣಿಸ

ಬಲ್ಲ, ಆದರೆ ಯಾವ ಸ್ಥಿತಿಯಲ್ಲೂ ತನ್ನ ನೈಜ ಉಪಕಾರಿಯನ್ನು ಕಡೆಗಣಿಸಲಾರ. ಜೀವನದ ಮರ್ಯಾದೆಯು ದೇವನೊಂದಿಗೆ ಸಂಬಂಧದೊಡನೆ ಜೋಡಿಕೊಂಡಿದೆ ಎಂಬುದನ್ನು ನಾವು ಬಲ್ಲೆವು. ಅಲ್ಲಾಹನೊಂದಿಗೆ ಸಂಬಂಧವಿಲ್ಲದಿದ್ದರೆ, ಜೀವನವು ನಿರುಪಯುಕ್ತ, ಕಳಾಹೀನ ಮತ್ತು ಕಾಂತಿಹೀನವಾಗಿ ಬಿಡುವುದು. ಯಾವ ರೀತಿ ಸಾರ್ವಲೌಕಿಕತೆಯ ಹೊರತು ಧರ್ಮವು ಅಪೂರ್ಣವಾಗಿರುತ್ತದೋ ಅದೇ ರೀತಿ ಸ್ಥಿರತೆಯ ಹೊರತು ಜೀವನವೂ ಅರ್ಥಹೀನವಾಗುತ್ತದೆ. ಅಲ್ಲಾಹನು ಜೀವನದ ಮೂಲ ಸೆಲೆಯಾಗಿದ್ದಾನೆ. ಅವನು ಸ್ಥಿರವಾದ ಜೀವನದ ಸುವಾರ್ತೆ ನೀಡುತ್ತಾನೆ. ಅಲ್ಲಾಹನು ಸಕಲ ಮಾನವರ ಮಾರ್ಗದರ್ಶನಕ್ಕಾಗಿ ಪವಿತ್ರ ಕುರ್‌ಆನ್‌ನಂತಹ ಗ್ರಂಥವನ್ನು ಅವತೀರ್ಣಗೊಳಿಸಿರುವುದೇ ಅವನ ಅತಿ ದೊಡ್ಡ ಉಪಕಾರವಾಗಿದೆ. ಮಾನವನು ಅಲ್ಲಾಹನ ಮಹಾನತೆಯನ್ನು ಅಂಗೀಕರಿಸಬೇಕೆಂಬುದೇ ಕುರ್‌ಆನ್ ಅವತೀರ್ಣದ ಉದ್ದೇಶವಾಗಿದೆ. ಅದೇ ರೀತಿ 'ಅಲ್ಲಾಹನ ಮಹಿಮೆಯನ್ನು ಕೊಂಡಾಡುವುದು' (ಅಲ್ ಬಕರ: 185) ಉಪವಾಸದ ಉದ್ದೇಶಗಳಲ್ಲಿ ಒಂದಾಗಿದೆ. ಅದರ ಪ್ರಾಯೋಗಿಕ ರೂಪವು ತರಾವೀಹ್ ನಮಾಝ್ ಮತ್ತು ತಿಂಗಳಾಂತ್ಯಕ್ಕೆ ನಿರ್ವಹಿಸುವ ಈದ್ ನಮಾಝ್ ಆಗಿದೆ. ಉಪವಾಸ ವ್ರತಾಚರಿಸುವ ಮೂಲಕ ವ್ಯಕ್ತಿಯು ಅಲ್ಲಾಹನ ಮಹಾನತೆಯ ಮುಂದೆ ತಲೆ ಬಾಗುತ್ತಾನೆ, ಜಗತ್ತಿನಲ್ಲಿ ಅಲ್ಲಾಹನ ಮಹಿಮೆಯು ಮೇಳೈಸಬೇಕೆಂಬುದಾಗಿ ಆಗ್ರಹಿಸುತ್ತಾನೆ. ಉಪವಾಸಿಗನು ಹಸಿವು ಮತ್ತು ದಾಹವನ್ನು ಸಹಿಸುತ್ತಾನೆ ಆದರೆ ಅಲ್ಲಾಹನ ಆಜ್ಞೋಲ್ಲಂಘನೆಯನ್ನು ಮಾಡಲಾನು. ತನ್ನ ಯಾವುದೇ ಕೃತ್ಯವನ್ನು ಅಲ್ಲಾಹನಿಂದ ಮರೆಸಲಾರೆ ಎಂಬುದನ್ನು ಅವನು ಬಲ್ಲನು. ಅದೇ ರೀತಿ ಉಪವಾಸವಿರಿಸುವ ಮೂಲಕ, ಅಲ್ಲಾಹನು ತನ್ನಿಂದ ಯಾವತ್ತಿಗೂ ದೂರವಿಲ್ಲ ಎಂಬ ಪ್ರಜ್ಞೆಯನ್ನು ಬೆಳೆಸಿಕೊಳ್ಳುತ್ತಾನೆ. ಅಲ್ಲಾಹನ ಅಸ್ತಿತ್ವದ ಪ್ರಜ್ಞೆಯು ಅವನಲ್ಲಿ ಎಷ್ಟೊಂದು ಸೂಕ್ಷ್ಮ ಭಾವನೆಗಳನ್ನು ಬೆಳೆಸುತ್ತದೆ ಮತ್ತು ಅವನ ಹೃದಯವು ದೇವಭಯದಿಂದ ತುಂಬಿಕೊಂಡಿರುತ್ತದೆ!

ರಮಝಾನ್ ತಿಂಗಳನ್ನು ಉಪವಾಸ ವ್ರತಕ್ಕೆ ಕಾದಿರಿಸಿರುವುದರಿಂದಾಗಿ, ಎಲ್ಲರಿಗೂ ಏಕಕಾಲಕ್ಕೆ ಉಪವಾಸವಿರಿಸಬೇಕಾಗುತ್ತದೆ. ಈ ರೀತಿ ಒಟ್ಟಿಗೇ ಉಪವಾಸ ವ್ರತಾಚರಿಸುವುದರಿಂದ ಇಡೀ ಸಮಾಜದ ವಾತಾವರಣವೇ ಬದಲಾಗುತ್ತದೆ. ವಾತಾವರಣವಿಡೀ ಆಧ್ಯಾತ್ಮಿಕತೆಯಿಂದ ತುಂಬಿ ತುಳುಕುತ್ತದೆ. ಧೈರ್ಯವಿಲ್ಲದ ಮತ್ತು ದುರ್ಬಲ ಸಂಕಲ್ಪವಿರುವ ವ್ಯಕ್ತಿಯ ಮಟ್ಟಿಗೂ ಒಳಿತಿನ ದಾರಿ ತುಳಿಯುವುದು ಸುಲಭವಾಗುತ್ತದೆ.

ಪ್ರವಾದಿವಚನಗಳು ಮತ್ತು ಇಸ್ಲಾಮೀ ಶಿಕ್ಷಣದ ಕುರಿತು ಚಿಂತನೆ ನಡೆಸುವು

ದರಿಂದ ಒಂದು ವಿಷಯವು ನಮ್ಮ ಮುಂದೆ ವ್ಯಕ್ತವಾಗುತ್ತದೆ. ಅದೇನೆಂದರೆ, ಅಲ್ಲಾಹನ ಕ್ರೋಧ ಅಥವಾ ನರಕದ ಬೆಂಕಿಯಿಂದ ಮುಕ್ತಿಯನ್ನು ಪಡೆಯುವುದು ಹಾಗೂ ಮಾನವನಿಗೆ ಮೋಕ್ಷ ಪ್ರಾಪ್ತವಾಗುವುದರ ಲಕ್ಷಣವೇನಿದೆಯೋ, ಅದು ವ್ಯಕ್ತಿಯು ಕೆಡುಕುಗಳಿಂದ ಮುಕ್ತಿಯನ್ನು ಹೊಂದುವುದರಲ್ಲಿದೆ, ಅಕ್ರಮ-ದೌರ್ಜನ್ಯ ಗಳಿಂದ ತನ್ನನ್ನು ತಡೆದಿರಿಸಿಕೊಳ್ಳುವುದರಲ್ಲಿದೆ, ಸ್ವಾರ್ಥದ ಕೇಡಿನಿಂದ ತನ್ನನ್ನು ರಕ್ಷಿಸಿಕೊಳ್ಳುವುದರಲ್ಲಿದೆ. ಒಟ್ಟಿನಲ್ಲಿ ದೇವನ ಸೃಷ್ಟಿಗಳ ಮೇಲೆ ಅವನಲ್ಲಿ ದ್ವೇಷದ ಬದಲು ಪ್ರೀತಿಯು ಬೆಳೆಯಬೇಕು, ಅವನು ಜನರಿಗೆ ಮಿತ್ರ ಮತ್ತು ಸಹಾಯಕ ನಾಗಬೇಕು, ಸಕಲ ಮಾನವರ ಒಳಿತು ಅವನ ಉದ್ದೇಶವಾಗಿರಬೇಕು, ಎಲ್ಲ ರೀತಿಯ ಸಂಕುಚಿತ ದೃಷ್ಟಿಕೋನ ಮತ್ತು ಸಂಕುಚಿತ ಮನಸ್ಥಿತಿಯಿಂದ ತನ್ನನ್ನು ಮುಕ್ತನಾಗಿರಿಸಬೇಕು. ಅದುವೇ ಅಲ್ಲಾಹನೊಂದಿಗೆ ಪ್ರಬಲವಾದ ಸಂಬಂಧಕ್ಕೆ ಸಾಕ್ಷಿಯಾಗಿದೆ. ಅದುವೇ ತಕ್ವಾ ಮತ್ತು ದೇವಭಯದಿಂದ ಕೂಡಿದ ಜೀವನದ ಮೂಲ ಗಳಿಕೆಯಾಗಿದೆ. ಅದುವೇ ರಮಝಾನ್ ತಿಂಗಳ ಆಗಮನದ ನೈಜ ಉದ್ದೇಶವಾಗಿದೆ.

ಒಟ್ಟಿನಲ್ಲಿ, ನಮ್ಮಲ್ಲಿರುವ ಕೊರತೆಗಳನ್ನು ನೀಗಿಸಲು ಮತ್ತು ನಮ್ಮ ಹೃದಯದಲ್ಲಿ ತಕ್ವಾದ ಗುಣವನ್ನು ಹೆಚ್ಚೆಚ್ಚು ಬೆಳೆಸುವಂತಾಗಲು ರಮಝಾನ್ ಪ್ರತಿ ವರ್ಷವೂ ಆಗತವಾಗುತ್ತದೆ. ಹಾಗಾಗಿ ನಾವು ದೇವಭಯವುಳ್ಳ ಅತ್ಯುತ್ತಮ ಮಾನವರಾಗಬೇಕೆಂಬ ಆಗ್ರಹವು ನಮ್ಮೆಲ್ಲರಲ್ಲಿಯೂ ಬೆಳೆದು ಬರಬೇಕಾಗಿದೆ. ಸದ್ವರ್ತನೆಯಲ್ಲಿ ಕಂಡುಬರುವ ಸೌಂದರ್ಯವು ಯಾವುದೇ ಹೂವಿನಲ್ಲಿ ಕಾಣ ಲಾರದು; ಸಚ್ಚಾರಿತ್ರ್ಯ ಮತ್ತು ಸದಾಚಾರದಲ್ಲಿರುವಂತಹ ಆಕರ್ಷಣೆಯನ್ನು ಬೇರೆ ಎಲ್ಲಿಯೂ ಹುಡುಕಲು ಸಾಧ್ಯವಿಲ್ಲ. ಪವಿತ್ರ ಕುರ್‌ಆನಿನ ಪಾರಿಭಾಷಿಕದಲ್ಲಿ ಅದುವೇ 'ಅಲ್ ಹಸನಾತ್' (ಒಳಿತುಗಳು) ಆಗಿದೆ. ಅಲ್ಲಾಹ್ ಮೂಲತಃ ನಮ್ಮಿಂದ ಬಯಸುವುದೂ ಇದನ್ನೇ. ಅವನ ಪರಿಶುದ್ಧತೆ ಮತ್ತು ಸಮೃದ್ಧಿಯ ಬೇಡಿಕೆಯೂ ಇದುವೇ ಆಗಿದೆ. ರಮಝಾನ್ ತಿಂಗಳು ಇದಕ್ಕಾಗಿಯೇ ಆಗತವಾ ಗುತ್ತದೆ. ಆದ್ದರಿಂದ ಈ ತಿಂಗಳಲ್ಲಿ ಪ್ರಸ್ತುತ ಬೇಡಿಕೆಯನ್ನು ಗಳಿಸಲಿಕ್ಕಾಗಿ ನಾವು ವಿಶೇಷವಾಗಿ ಪ್ರಯತ್ನಿಸಬೇಕಾಗಿದೆ.



# ಉಪವಾಸ ವ್ರತ ಎಂದರೇನು?

ಮಾನವನ ಸ್ವಾಭಾವಿಕ ಪ್ರತಿಭೆ ಮತ್ತು ಸಾಮರ್ಥ್ಯಗಳು ಬೆಳೆದು ಬರಲು ಮತ್ತು ಪೋಷಿಸಲ್ಪಡಲು ಶಿಕ್ಷಣ–ತರಬೇತಿಯ ಅಗತ್ಯ ಬಹಳವಿರುತ್ತದೆ. ಅದರ ಹೊರತು ಸಾಮಾನ್ಯವಾಗಿ ಮನಸ್ಸುಗಳ ಮೇಲೆ ಭೌತಿಕತೆ ಮತ್ತು ಲಾಭಬಡುಕತನವು ಪ್ರಭಾವ ಬೀರುತ್ತವೆ. ಅದು ವಸ್ತುಗಳನ್ನು ಅವುಗಳ ಸ್ವಾಭಾವಿಕ ಪರಿಶುದ್ಧತೆಯೊಂದಿಗೆ ನೋಡುವುದರಿಂದ ತಡೆಯುತ್ತದೆ. ಅದು ಜೀವನದ ಪ್ರಮುಖ ಮೌಲ್ಯ ಮತ್ತು ವಾಸ್ತವಿಕತೆಗಳನ್ನು ಅರಿಯುವುದರಿಂದಲೂ ತಡೆಯುತ್ತದೆ. ಉಪವಾಸ ವ್ರತವು ಒಂದು ಪವಿತ್ರವಾದ ಆರಾಧನೆಯಾಗಿರುವಂತೆಯೇ ನಮ್ಮ ಆಧ್ಯಾತ್ಮಿಕ ಮತ್ತು ನೈತಿಕ ತರಬೇತಿಯ ಅತ್ಯುತ್ತಮ ಮಾಧ್ಯಮವೂ ಆಗಿದೆ. ಉಪವಾಸ ವ್ರತದ ಮೂಲ ಉದ್ದೇಶ ಆತ್ಮದ ಪರಿಶುದ್ಧತೆ ಮತ್ತು ಧರ್ಮನಿಷ್ಠೆಯಾಗಿದೆ. ಆದ್ದರಿಂದಲೇ ಪವಿತ್ರ ಕುರ್‌ಆನ್ ಹೇಳುತ್ತದೆ, "ಓ ಸತ್ಯವಿಶ್ವಾಸಿಗಳೇ, ಗತ ಪ್ರವಾದಿಗಳ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದ್ದಂತೆಯೇ ನಿಮ್ಮ ಮೇಲೂ ಉಪವಾಸ ವ್ರತನ್ನು ಕಡ್ಡಾಯ ಗೊಳಿಸಲಾಗಿದೆ. ಇದರಿಂದ ನಿಮ್ಮಲ್ಲಿ ಧರ್ಮನಿಷ್ಠೆಯ ಗುಣವಿಶೇಷ ಉಂಟಾಗುವುದು ಎಂದು ಆಶಿಸಲಾಗಿದೆ." **(ಅಲ್ ಬಕರ: 183)**

ಎಲ್ಲಿಯ ವರೆಗೆ ವ್ಯಕ್ತಿಯು ಆತ್ಮನಿಯಂತ್ರಣವನ್ನು ಹೊಂದುವುದಿಲ್ಲವೋ ಅಲ್ಲಿಯ ವರೆಗೆ ಅವನಲ್ಲಿ ಧರ್ಮನಿಷ್ಠೆಯು ಬೆಳೆದು ಬರಲಾರದು. ಚಿತ್ತಾಕಾಂಕ್ಷೆಗಳ ಪ್ರಭಾವದಲ್ಲಿರುವ ವ್ಯಕ್ತಿಗೆ ಅಲ್ಲಾಹನ ಮಹಾನತೆಯ ಪರಿವೆಯೂ ಇರುವುದಿಲ್ಲ ಮತ್ತು ಜೀವನದ ಉನ್ನತ ವಾಸ್ತವಿಕತೆಗಳನ್ನು, ಅಗತ್ಯಗಳನ್ನು ಗ್ರಹಿಸುವುದೂ ಇಲ್ಲ. ಅವನ ಚಿತ್ತಾಕಾಂಕ್ಷೆಗಳು ತನ್ನ ಸೃಷ್ಟಿಯ ವಾಸ್ತವಿಕ ಬೇಡಿಕೆಗಳ ಕಡೆಗೆ ಗಮನ ಹರಿಸುವುದರಿಂದ ಅವನನ್ನು ತಡೆಯುತ್ತವೆ. ಹೀಗೆ ಉಣ್ಣುವ, ಕುಡಿ ಯುವ ಮತ್ತು ಲೈಂಗಿಕ ಆಸೆಗಳ ಈಡೇರಿಕೆಗಳ ಹೊರತು ಇನ್ನೂ ಕೆಲವು ವಿಷಯಗಳು ನಮ್ಮ ಗಮನವನ್ನು ಬಯಸುತ್ತವೆ ಎಂಬುದನ್ನು ಉಪವಾಸ ವ್ರತವು ಪ್ರಾಯೋಗಿಕವಾಗಿ ತೋರಿಸಿ ಕೊಡುತ್ತದೆ. ಉಪವಾಸ ವ್ರತವು ದಾಸನನ್ನು

ಅಲ್ಲಾಹನೆಡೆಗೆ ಮತ್ತು ಜೀವನದ ಉನ್ನತ ವಾಸ್ತವಿಕತೆಗಳ ಕಡೆಗೆ ಗಮನ ಹರಿಸುವಂತೆ ಮಾಡುತ್ತದೆ. ಅದು ದಾಸನನ್ನು ಏಕಾಂತತೆಯ ಉನ್ನತ ಸ್ಥಾನದೆಡೆಗೆ ಕೊಂಡೊಯ್ಯುತ್ತದೆ; ಅಲ್ಲಿಂದ ಅವನು ತನ್ನ ಪ್ರಭುವಿಗೆ ತೀರಾ ನಿಕಟನಾಗುತ್ತಾನೆ, ಅಲ್ಲಿ ಅಂಧಕಾರವು ಕರಗಿ ಹೋಗುತ್ತದೆ ಮತ್ತು ಆಧ್ಯಾತ್ಮಿಕವಾದ ಪರದೆಗಳೆಲ್ಲವೂ ಸರಿದು ಹೋಗುತ್ತವೆ. ಈ ವಾಸ್ತವಿಕತೆಯನ್ನೇ ಉಲೆಮಾಗಳು ಈ ರೀತಿ ಬಣ್ಣಿಸಿದ್ದಾರೆ, "ಎಷ್ಟೋ ಮಂದಿ ಉಪವಾಸವಿರಿಸಿರುವುದಿಲ್ಲ, ಆದರೂ ವಾಸ್ತವಿಕವಾಗಿ ಅವರು ಉಪವಾಸಿಗರಾಗಿರುತ್ತಾರೆ. ಅಂತೆಯೇ ಎಷ್ಟೋ ಮಂದಿ ಉಪವಾಸಿಗರಾಗಿರುತ್ತಾರೆ, ಆದರೆ ವಾಸ್ತವದಲ್ಲಿ ಅವರು ಉಪವಾಸದಲ್ಲಿರುವುದಿಲ್ಲ."

ಉಪವಾಸ ವ್ರತವು ಮೇಲ್ನೋಟಕ್ಕೆ ಆಹಾರ–ಪಾನೀಯ ಸೇವನೆ ಮತ್ತು ಲೈಂಗಿಕೇಚ್ಛೆಯ ಈಡೇರಿಕೆಯಿಂದ ತಡೆದಿರಿಸಿಕೊಳ್ಳುವುದರ ಹೆಸರಾಗಿದೆ. ಆದರೆ ಆಂತರಿಕವಾಗಿ ಉಪವಾಸವು ವ್ಯಕ್ತಿಗೆ ಆಕಾಂಕ್ಷೆಗಳ ನಿಯಂತ್ರಣ ಮತ್ತು ಧರ್ಮನಿಷ್ಠೆಯ ಜೀವನ ಲಭಿಸುವುದರ ಹೆಸರಾಗಿದೆ. ಕೆಲವೊಮ್ಮೆ ವ್ಯಕ್ತಿಯು ಮೇಲ್ನೋಟಕ್ಕೆ ಉಪವಾಸಿಗನಾಗಿ ಕಾಣುತ್ತಾನೆ. ಆದರೆ ವಾಸ್ತವದಲ್ಲಿ ಅವನ ಉಪವಾಸವು ವ್ರತವಾಗಿರುವುದಿಲ್ಲ. ಏಕೆಂದರೆ ಅವನ ದೃಷ್ಟಿಯು ಕರ್ಮಶುದ್ಧವಾಗಿರುವುದಿಲ್ಲ ಮತ್ತು ಅವನ ಜೀವನವು ಪರಿಶುದ್ಧತೆ, ದೇವನಿಷ್ಠೆಯ ದರ್ಪಣವಾಗಿರುವುದಿಲ್ಲ.

ಉಪವಾಸ ವ್ರತಕ್ಕಾಗಿ ಪವಿತ್ರ ಕುರ್‌ಆನ್ ಬಳಸಿದ ಪದವು 'ಸೌಮ್' ಎಂದಾಗಿದೆ. ಅದರ ಶಬ್ದಾರ್ಥವು ಪಥ್ಯ, ತಡೆದಿರಿಸುವುದು ಮತ್ತು ಮೌನ ಎಂದಾಗಿದೆ. ಇಮಾಮ್ ರಾಗಿಬ್(ರ) ಹೇಳುತ್ತಾರೆ, "ಸೌಮ್‌ನ ಮೂಲಾರ್ಥವು ಒಂದು ಕಾರ್ಯದಿಂದ ತನ್ನನ್ನು ತಡೆದುಕೊಳ್ಳುವುದಾಗಿದೆ. ಅದು ಆಹಾರ–ಪಾನೀಯ ಸೇವನೆಗೆ ಸಂಬಂಧಿಸಿರಲಿ ಅಥವಾ ನಡೆ–ನುಡಿಗೆ ಸಂಬಂಧಿಸಿರಲಿ." ಆದ್ದರಿಂದಲೇ ಕುದುರೆಯು ನಡೆಯುವುದನ್ನು ಅಥವಾ ಮೇಯುವುದನ್ನು ನಿಲ್ಲಿಸಿದಾಗ ಅದನ್ನು 'ಸಾಇಮ್' ಎಂದು ಹೇಳುತ್ತಾರೆ. ಓರ್ವ ಕವಿ ಹೇಳುತ್ತಾರೆ, "ಖೈಲು ಸಿಯಾಮುನ್ ವ ಉಖ್ರಾ ಗೈರು ಸಾಇಮತಿನ್." (ಕೆಲವು ಅಶ್ವಗಳು ಮೇಯುವುದಿಲ್ಲ, ಕೆಲವು ಮೇಯುತ್ತವೆ.) ಸ್ತಬ್ಧವಾಗಿರುವ ಗಾಳಿ ಮತ್ತು ಮಧ್ಯಾಹ್ನದ ಸಮಯವನ್ನೂ 'ಸೌಮ್' ಎನ್ನುತ್ತಾರೆ. ಸೂರ್ಯನು ಅಪರಾಹ್ನದ ವೇಳೆ ಆಕಾಶದಲ್ಲಿ ಸ್ವಲ್ಪ ಹೊತ್ತು ಸ್ತಬ್ಧವಾಗುತ್ತದೆ ಎಂಬ ಕಲ್ಪನೆಯಿಂದ ಹಾಗೆ ಹೇಳಲಾಗುತ್ತದೆ."

ಅಂದರೆ ಒಂದು ವಸ್ತುವಿನಿಂದ ತಡೆದುಕೊಳ್ಳುವುದಕ್ಕೆ 'ಸೌಮ್' ಆಗಿದೆ ಎಂದು ಪ್ರಸ್ತುತ ವಿವರಣೆಯಿಂದ ತಿಳಿಯಬಹುದಾಗಿದೆ. ಒಟ್ಟಿನಲ್ಲಿ ಉಪವಾಸ

ವ್ರತದ ಸ್ಥಿತಿಯಲ್ಲಿ ಆಹಾರ–ಪಾನೀಯ ಸೇವನೆ ಮತ್ತು ಲೈಂಗಿಕೇಚ್ಛೆಯಿಂದ ತನ್ನನ್ನು ತಡೆದಿರಿಸಿಕೊಂಡಂತೆಯೇ, ಪಾಪಕಾರ್ಯ ಮತ್ತು ಅಪ್ರಿಯ ಚಟುವಟಿಕೆಗಳನ್ನು ಶಾಶ್ವತವಾಗಿ ತೊರೆಯುವ ವ್ಯಕ್ತಿಯೇ ನಿಜವಾದ ಉಪವಾಸಿಗ ಎನಿಸಿಕೊಳ್ಳುತ್ತಾನೆ.

ಉಪವಾಸ ವ್ರತ ಎಂಬುದು, ತನ್ನನ್ನು ಅಲ್ಲಾಹನಿಗಾಗಿ ಸಕಲ ವಸ್ತು–ವಿಷಯಗಳಿಂದ ಮುಕ್ತನಾಗುವ ಮತ್ತು ಪರಿಪೂರ್ಣವಾಗಿ ಅಲ್ಲಾಹನ ಕಡೆಗೆ ಗಮನ ಕೇಂದ್ರಿತನಾಗುವುದರ ಹೆಸರಾಗಿದೆ. ಈ ಅರ್ಥದಲ್ಲಿ ಉಪವಾಸ ವ್ರತಕ್ಕೂ ಇಅ್‌ತಿಕಾಫ್‌ಗೂ ಬಹಳ ಸಾಮ್ಯತೆ ಇದೆ. ಆದ್ದರಿಂದಲೇ ಇಅ್‌ತಿಕಾಫ್‌ನೊಂದಿಗೆ ಉಪವಾಸ ವ್ರತಾಚರಿಸುವುದು ಅಗತ್ಯವೆಂದು ಹೇಳಲಾಗಿದೆ. ಗತ ಧರ್ಮಶಾಸ್ತ್ರಗಳಲ್ಲಿ ವ್ರತಾಚರಣೆಯ ಸ್ಥಿತಿಯಲ್ಲಿ ಮಾತನಾಡುವುದರಿಂದಲೂ ತಡೆದಿರಿಸಿಕೊಳ್ಳಲಾಗುತ್ತಿತ್ತು. ಈಸಾ(ಅ)ರ ಜನನದ ವೇಳೆ ಮರ್ಯಮ್(ಅ)ರವರು ಬಹಳ ಚಿಂತಿತರಾಗಿ, ನಾನು ಇದಕ್ಕಿಂತ ಮರಣ ಹೊಂದುತ್ತಿದ್ದರೆ ಮತ್ತು ಜನರು ನನ್ನನ್ನು ಮರೆತು ಬಿಡುತ್ತಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ಹಲುಬುತ್ತಿದ್ದ ವೇಳೆ, ಅವರಿಗೆ ಹೀಗೆ ಸಾಂತ್ವನ ನೀಡಲಾಗಿತ್ತೆಂದು ಪವಿತ್ರ ಕುರ್‌ಆನಿನಲ್ಲಿ ಹೇಳಲಾಗಿದೆ, "ನೀವು ಮಾನವರಾರನ್ನಾದರೂ ಕಂಡರೆ, 'ನಾನು ಕರುಣಾನಿಧಿ(ಅಲ್ಲಾಹ್)ಗಾಗಿ ಉಪವಾಸ ವ್ರತದ ಹರಕೆ ಹೊತ್ತಿರುವುದರಿಂದ ಇಂದು ಯಾರೊಡನೆಯೂ ಮಾತನಾಡಲಾರೆ' ಎಂದು (ಸಂಜ್ಞೆಯಿಂದ) ಹೇಳಿಬಿಡಿರಿ." (ಮರ್ಯಮ್: 26)

ಉಪವಾಸ ವ್ರತದ ಸ್ಥಿತಿಯಲ್ಲಿ ಮಾನವನಿಗೆ ಬಹುತೇಕವಾಗಿ ದೇವಚರರ ಗುಣವಿಶೇಷವು ಲಭಿಸುತ್ತದೆ. ದೇವಚರರು ಆಹಾರ–ಪಾನೀಯ ಸೇವನೆಯಿಂದ ನಿರಪೇಕ್ಷರಾಗಿದ್ದಾರೆ. ಅಲ್ಲಾಹನ ಸ್ತುತಿ ಮತ್ತು ಕೀರ್ತನೆಗಳೇ ಅವರ ಆಹಾರವಾಗಿದೆ. ಉಪವಾಸ ವ್ರತಾಚರಣೆಯ ಸ್ಥಿತಿಯಲ್ಲಿ ವಿಶ್ವಾಸಿ ದಾಸನು ತನ್ನ ಚಿತ್ತಾಕಾಂಕ್ಷೆ ಮತ್ತು ಆಹಾರ–ಪಾನೀಯ ಸೇವನೆಯಂದ ದೂರವುಳಿದು, ದೇವನ ದಾಸ್ಯಾರಾಧನೆ ಯಲ್ಲಿ ತಲ್ಲೀನನಾಗಿರುತ್ತಾನೆ.

ಉಪವಾಸ ವ್ರತಾಚರಿಸುವುದರಿಂದ ವ್ಯಕ್ತಿಯು ತನ್ನ ಚಿತ್ತಾಕಾಂಕ್ಷೆಗಳನ್ನು ನಿಯಂತ್ರಿಸಲು ಶಕ್ತನಾಗುತ್ತಾನೆ. ಇನ್ನು ತನ್ನ ಚಿತ್ತವನ್ನು ಸೋಲಿಸಲಾಗದ ವ್ಯಕ್ತಿಯು ಸತ್ಯದ ಪರ ಮತ್ತು ಮಿಥ್ಯದ ವಿರುದ್ಧ ಸತತ ಪರಿಶ್ರಮ ಪಡುವನೆಂದು ನೀವು ನಿರೀಕ್ಷಿಸಲಾರಿರಿ. ಜಿಹಾದ್‌ಗೆ ಸಹನೆ ಮತ್ತು ನಿಶ್ಚಯದಾರ್ಢ್ಯ ಎರಡೂ ಅಗತ್ಯವಾಗಿದೆ. ಸಹನೆ ಮತ್ತು ದೃಢ ಸಂಕಲ್ಪವು ಉಪವಾಸ ವ್ರತದ ವಿಶೇಷತೆಗಳಲ್ಲಿ ಸೇರಿದೆ. ಆದ್ದರಿಂದಲೇ ಪ್ರವಾದಿವರ್ಯರು(ಸ) ಉಪವಾಸದ ತಿಂಗಳನ್ನು 'ಸಹನೆಯ

ತಿಂಗಳು' ಎಂದು ಹೇಳಿರುವುದು. ರಮಝಾನ್ ತಿಂಗಳಲ್ಲಿ ನಿರಂತರವಾಗಿ ಒಂದು ತಿಂಗಳ ಕಾಲ ಸಹನೆ-ಸಂಯಮ ಮತ್ತು ದೇವಾನುಸರಣೆಯ ಅಭ್ಯಾಸ ಮಾಡಿಸಲಾಗುತ್ತದೆ.

ಉಪವಾಸ ವ್ರತವು ಒಂದು ಅತ್ಯಂತ ಪರಿಶುದ್ಧ ಆರಾಧನೆಯಾಗಿದೆ. ಉಪವಾಸ ವ್ರತವು ಅಲ್ಲಾಹನ ಮಹಾನತೆ ಮತ್ತು ಶ್ರೇಷ್ಠತೆಯ ದರ್ಶನ ಮತ್ತು ಕೃತಜ್ಞತಾರ್ಪಣೆಯ ಮಾಧ್ಯಮವಾಗಿದೆ. ಉಪವಾಸ ವ್ರತಕ್ಕೆ ಸಂಬಂಧಿಸಿ ಪವಿತ್ರ ಕುರ್‌ಆನಿನಲ್ಲಿ 'ಲಅಲ್ಲಕುಮ್ ತತ್ತಕೂನ್' (ನಿಮ್ಮಲ್ಲಿ ಧರ್ಮನಿಷ್ಠೆ ಉಂಟಾಗಲು) ಎಂದು ಹೇಳಿರುವಂತೆಯೇ ಹೀಗೂ ಉದ್ಧರಿಸಲಾಗಿದೆ, "ಸನ್ಮಾರ್ಗದರ್ಶನದ ಮೂಲಕ ನಿಮ್ಮನ್ನು ಪ್ರತಿಷ್ಠಿತಗೊಳಿಸಿದ ಅಲ್ಲಾಹನ ಮಹಿಮೆಯನ್ನು ಕೊಂಡಾಡುತ್ತಾ ಅವನಿಗೆ ಕೃತಜ್ಞರಾಗಿರಲಿಕ್ಕಾಗಿಯೂ ಈ ವಿಧಾನವನ್ನು ತೋರಿಸಿ ಕೊಡಲಾಗಿದೆ."

(ಅಲ್ ಬಕರ: 185)

ಮಾನವ ಕುಲದ ಮೇಲೆ ಅಲ್ಲಾಹನ ಕೊಡುಗೆ ಅಪಾರವಾಗಿದೆ. ಆದರೆ ಎಲ್ಲಕ್ಕಿಂತಲೂ ಮಿಗಿಲಾದ ಕೊಡುಗೆಯು ಪವಿತ್ರ ಕುರ್‌ಆನ್‌ನಂತಹ ಅನುಗ್ರಹವಾಗಿದೆ. ಪವಿತ್ರ ಕುರ್‌ಆನ್ ಮಾನವನಿಗೆ ಶಾಶ್ವತ ಜೀವನದ ದಾರಿಯನ್ನು ತೋರಿಸುತ್ತದೆ; ಮಾನವನು ಸಾಮಾನ್ಯ ಸ್ಥಿತಿಯಲ್ಲಿ ಕಲ್ಪಿಸಲೂ ಸಾಧ್ಯವಿಲ್ಲದಂತಹ ನೈತಿಕ ಔನ್ನತ್ಯವನ್ನು ತೋರಿಸಿ ಕೊಡುತ್ತದೆ. ಅಲ್ಲಾಹನ ಈ ಮಹಾನ್ ಕೊಡುಗೆಗೆ ಪ್ರತಿಯಾಗಿ ಮಾನವನು ಉಪವಾಸ ವ್ರತಾಚರಿಸುವ ಮೂಲಕ ಸಂತೋಷ ವ್ಯಕ್ತಪಡಿಸುವುದರ ಜೊತೆಗೆ ಕೃತಜ್ಞತೆಯನ್ನು ಅರ್ಪಿಸುತ್ತಾನೆ. ಮಾನವನು ಅಲ್ಲಾಹನ ದಾಸ ಮತ್ತು ಅವನ ಆರಾಧಕನಾಗಿದ್ದಾನೆ. ಅಲ್ಲಾಹ್ ಅವನ ಒಡೆಯ ಮತ್ತು ಆರಾಧ್ಯನಾಗಿದ್ದಾನೆ. ತನ್ನ ಪ್ರಭುವಿನೊಂದಿಗಿನ ಸಂಬಂಧವೇನಿದೆಯೋ ಅದನ್ನು ವ್ಯಕ್ತಪಡಿಸುವುದರಲ್ಲಿ ಮಾನವನಿಗೆ ಸಂತೊಷ ಮತ್ತು ಆನಂದ ಪ್ರಾಪ್ತವಾಗುತ್ತದೆ.

ಈ ಸಂಬಂಧವನ್ನು ವ್ಯಕ್ತಪಡಿಸುವುದು ವಾಸ್ತವದಲ್ಲಿ ಅಲ್ಲಾಹನ ಕೊಡುಗೆಗಳನ್ನು ಕೊಂಡಾಡುವುದು ಕೂಡ ಆಗಿದೆ. ಅದುವೇ ಕೃತಜ್ಞತೆಯ ಮೂಲ ಬುನಾದಿಯಾಗಿದೆ. ರಮಝಾನ್ ತಿಂಗಳಲ್ಲಿ ಪವಿತ್ರ ಕುರ್‌ಆನ್ ಅವತೀರ್ಣ ಆರಂಭಗೊಂಡುದರಿಂದಲೇ ಉಪವಾಸ ವ್ರತಾಚರಿಸಲು ಅದೇ ತಿಂಗಳನ್ನು ಆಯ್ದುಕೊಳ್ಳಲಾಗಿದೆ. ಕುರ್‌ಆನ್ ಅವತರಣ ಮತ್ತು ಉಪವಾಸ ವ್ರತದಲ್ಲಿ ಬಹಳ ಸಾಮ್ಯತೆಗಳಿವೆ. ಯಾವ ಉದ್ದೇಶಗಳಿಗಾಗಿ ಪವಿತ್ರ ಕುರ್‌ಆನ್ ಅವತೀರ್ಣಗೊಂಡಿದೆಯೋ ಅವುಗಳನ್ನು ಗಳಿಸುವಲ್ಲಿ ಉಪವಾಸ ವ್ರತವು ಸಹಾಯಕವಾಗಿದೆ.

ರಮಝಾನಿನಲ್ಲಿ ಎಲ್ಲರೂ ಒಟ್ಟಿಗೆ ಉಪವಾಸ ವ್ರತಾಚರಿಸುವುದರಿಂದ

ಧರ್ಮಶೀಲತೆ ಮತ್ತು ಆಧ್ಯಾತ್ಮಿಕತೆ ಬೆಳೆಯುತ್ತದೆ. ಅದು ಹೃದಯಗಳಲ್ಲಿ ಗಾಢವಾದ ಪ್ರಭಾವವನ್ನು ಬೀರುತ್ತದೆ. ಅದರಿಂದ ಅಂಜುಬುರುಕ ಮತ್ತು ದುರ್ಬಲ ಸಂಕಲ್ಪವಿರುವ ವ್ಯಕ್ತಿಗೂ ಧರ್ಮಶೀಲತೆ ಮತ್ತು ಧರ್ಮನಿಷ್ಠೆಯ ಹಾದಿಯಲ್ಲಿ ನಡೆಯುವುದು ಸುಲಭವಾಗುತ್ತದೆ. ತನ್ನ ಹೊಣೆಗಾರಿಕೆಯು ಉಪವಾಸದ ಬಾಹ್ಯ ಶಿಷ್ಟಾಚಾರವನ್ನು ಪಾಲಿಸುವುದಕ್ಕೆ ಸೀಮಿತವಾಗಿಲ್ಲ, ಬದಲಾಗಿ ಉಪವಾಸದ ಮೂಲ ಉದ್ದೇಶದಿಂದ ಅಲಕ್ಷ್ಯನಾಗಿರಬಾರದು ಎಂಬ ವಾಸ್ತವಿಕತೆಯನ್ನು ಅರಿತುಕೊಂಡವನೇ ವಿಜಯಿಯಾಗುವನು. ಉಪವಾಸದ ಮೂಲೋದ್ದೇಶ ಮತ್ತು ಅದರ ತಾತ್ಪರ್ಯವು ಕೇವಲ ಉಪವಾಸ ವ್ರತದ ಕಾಲಕ್ಕೆ ಸೀಮಿತವಾಗಿಲ್ಲ. ಬದಲಾಗಿ ಅದು ಮಾನವನ ಇಡೀ ಜೀವನಕ್ಕೆ ಸಂಬಂಧಿಸಿದೆ. ಗತ ದೇವಗ್ರಂಥಗಳಲ್ಲಿಯೂ ಧರ್ಮನಿಷ್ಠೆ, ನಿಷ್ಕಳಂಕತೆ ಮತ್ತು ಉನ್ನತ ಚಾರಿತ್ರ್ಯದೊಂದಿಗೆ ಸಂಬಂಧಿಸಿರದ ಉಪವಾಸ ವ್ರತವನ್ನು ನಿರರ್ಥಕವೆಂದು ಸಾರಲಾಗಿದೆ.

"ನೋಡಿರಿ, ನಿಮ್ಮ ಉಪವಾಸದ ಫಲವೇನೆಂದರೆ – ವ್ಯಾಜ್ಯ, ಕಲಹ, ಕೇಡಿನ ಗುದ್ದು, ಇವುಗಳೇ. ನೀವು ಈಗ ಮಾಡುವ ಉಪವಾಸವು ನಿಮ್ಮ ಪ್ರಾರ್ಥನೆಯನ್ನು ಉನ್ನತ ಲೋಕಕ್ಕೆ ಮುಟ್ಟಿಸತಕ್ಕದ್ದಲ್ಲ. ಮನುಷ್ಯನು ತನ್ನ ಆತ್ಮವನ್ನು ಕುಂದಿಸಿಕೊಳ್ಳುವದಕ್ಕಾಗಿ ನಾನು ನೇಮಿಸಿದ ಉಪವಾಸದಿನವು ಇಂಥದೋ? ಒಬ್ಬನು ಜೊಂಡಿನಂತೆ ತಲೆಯನ್ನು ಬೊಗ್ಗಿಸಿಕೊಂಡು ಗೋಣೀತಟ್ಟನ್ನೂ ಬೂದಿಯನ್ನೂ ಆಸನ ಮಾಡಿಕೊಳ್ಳುವದು ಯೆಹೋವನಿಗೆ ಸಮರ್ಪಕವಾದ ಉಪವಾಸ ಎನ್ನುತ್ತೀರೋ? ನೋಡಿರಿ, ಕೇಡಿನ ಬಂಧಗಳನ್ನು ಬಿಚ್ಚುವದು, ನೊಗದ ಕಣ್ಣಿಗಳನ್ನು ಕಳಚುವದು, ಜಜ್ಜಿ ಹೋದವರನ್ನು ಬಿಡುಗಡೆ ಮಾಡುವದು, ನೊಗಗಳನ್ನೆಲ್ಲಾ ಮುರಿಯುವದು, ಹಸಿದವರಿಗೆ ಅನ್ನವನ್ನು ಹಂಚುವದು, ಅಲೆಯುತ್ತಿರುವ ಬಡವರನ್ನು ಮನೆಗೆ ಬರಮಾಡಿಕೊಳ್ಳುವದು, ಬೆತ್ತಲೆಯವರನ್ನು ಕಂಡಾಗಲೆಲ್ಲ ಅವರಿಗೆ ಹೊದಿಸುವದು, ನಿನ್ನಂತೆ ನರನಾಗಿರುವ ಯಾವನಿಗೇ ಆಗಲಿ ಮುಖ ತಪ್ಪಿಸಿಕೊಳ್ಳದಿರುವದು, ಇವುಗಳೇ ನನಗೆ ಇಷ್ಟವಾದ ಉಪವಾಸವ್ರತವಲ್ಲವೇ. ಇದನ್ನು ಆಚರಿಸುವಾಗ ನಿಮಗೆ ಬೆಳಕು ಉದಯದಂತೆ ಭೇದಿಸಿಕೊಂಡು ಬರುವದು, ನಿಮ್ಮ ಕ್ಷೇಮವು ಬೇಗನೇ ವಿಕಸಿಸುವದು; ನಿಮ್ಮ ಧರ್ಮವು ನಿಮಗೆ ಮುಂಬಲವಾಗಿ ಮುಂದವರಿಯುವದು, ಯೆಹೋವನ ಮಹಿಮೆಯು ನಿಮಗೆ ಹಿಂಬಲವಾಗಿರುವದು. ಆಗ ನೀವು ಕೂಗಿದರೆ ಯೆಹೋವನು ಉತ್ತರ ಕೊಡುವನು, ಮೊರೆಯಿಟ್ಟು ಕರೆದರೆ ಇಗೋ, ಇದ್ದೇನೆ ಅನ್ನುವನು. ನೀವು ನಿಮ್ಮ ಮಧ್ಯದೊಳಗಿಂದ ನೊಗವನ್ನೂ ಬೆರಳಸನ್ನೆಯನ್ನೂ ಕೆಡುಕಿನ

ನುಡಿಯನ್ನೂ ಹೋಗಲಾಡಿಸಿ ನಿಮಗೆ ಪ್ರಿಯವಾದದ್ದನ್ನು ಹಸಿದವರಿಗೆ ಒದಗಿಸಿ ಕುಗ್ಗಿದವರ ಆಶೆಯನ್ನು ನೆರವೇರಿಸಿದರೆ ಆಗ ನಿಮಗೆ ಕತ್ತಲಲ್ಲಿ ಬೆಳಕು ಉದಯಿಸುವದು, ನಿಮಗೆ ಅಂಧಕಾರವು ಪರಿಹಾರವಾಗಿ ಮಧ್ಯಾಹ್ನವಾಗುವದು."

**(ಯೆಶಾಯನು: 58: 4–10)**

ಒಂದು ವೇಳೆ ಉಪವಾಸ ವ್ರತದಿಂದ ಯಥಾರ್ಥವಾಗಿ ಪ್ರಯೋಜನವನ್ನು ಪಡೆದರೆ, ಅದು ವ್ಯಕ್ತಿಯನ್ನು ಸದಾ ತನ್ನ ಹೊಣೆಗಾರಿಕೆಯ ಪ್ರಜ್ಞೆ ಇರುವಂತಹ ಸ್ಥಿತಿಗೆ ತಂದು ನಿಲ್ಲಿಸುತ್ತದೆ. ಅವನ ದಿನರಾತ್ರೆಗಳು ಸದಾ ಧರ್ಮನಿಷ್ಠೆಯಿಂದ ಕೂಡಿರುವುದು ಮತ್ತು ಎಂದೂ ನಿರ್ಲಕ್ಷ್ಯದಿಂದ ಕಳೆಯಲಾರದು; ಅವನು ಸದಾ ಪಾಪಕಾರ್ಯ ಮತ್ತು ಅಪ್ರಿಯ ಕಾರ್ಯಗಳಿಂದ ದೂರವುಳಿಯುವನು; ತನ್ನ ಜೀವಿತೋದ್ದೇಶವು ಸದಾ ಅವನ ದೃಷ್ಟಿಯ ಮುಂದಿರುವುದು.



# ಉಪವಾಸ: ಒಂದು ಅಗತ್ಯ

ಮಾನವನು ತನ್ನ ಪ್ರಕೃತಿಯ ಮೂಲಭೂತ ಬೇಡಿಕೆಗಳನ್ನು ಅರಿಯಬೇಕು ಮತ್ತು ಅವುಗಳನ್ನು ಈಡೇರಿಸಲು ಪ್ರಯತ್ನಿಸಬೇಕು ಎಂಬುದರ ಹೊರತು ಬೇರೇ ಯಾವುದೇ ಉದ್ದೇಶ ಇಸ್ಲಾಮಿನಲ್ಲಿಲ್ಲ. ಅಲ್ಲಾಹನು ದಿವ್ಯವಾಣಿಯ ಮೂಲಕ ಮಾನವನಿಗೆ, ಅವನ ಸ್ವಂತ ಪ್ರಾಕೃತಿಕ ಬೇಡಿಕೆಗಳನ್ನು ನೆನಪಿಸಿ ಕೊಟ್ಟಿದ್ದಾನೆ. ಅಲ್ಲಾಹನು ಮಾನವನಿಗೆ ತನ್ನ ವಿಶೇಷ ಕೊಡುಗೆಯನ್ನು ದಯಪಾಲಿಸಿದ್ದಾನೆ. ಇತರ ಸೃಷ್ಟಿಗಳಿಗೆ ಹೋಲಿಸಿದರೆ, ಮಾನವನಿಗೆ ಶ್ರೇಷ್ಠತೆಯನ್ನು ದಯಪಾಲಿಸಿದ್ದಾನೆ; ಜೀವನದ ಉನ್ನತ ಧ್ಯೇಯವನ್ನು ಅರಿಯುವ ಸಾಮರ್ಥ್ಯವನ್ನು ನೀಡಿದ್ದಾನೆ. ಇದುವೇ ಅವನನ್ನು ಇತರ ಜೀವಿಗಳಿಂದ ಪ್ರತ್ಯೇಕಿಸುತ್ತದೆ. ಆದರೆ ಈ ಪ್ರಜ್ಞೆಯು ಕೆಲವೇ ಕೆಲವು ಮಂದಿಗೆ ಇರುವುದು. ಸಾಮಾನ್ಯವಾಗಿ ಮಾನವನ ಮನಸ್ಸನ್ನು ಲೌಕಿಕ ಲಾಭವೇ ಆವರಿಸಿಕೊಂಡಿರುತ್ತದೆ. ಇಂತಹ ಸ್ಥಿತಿಯಲ್ಲಿ ಯಾವುದೇ ವಸ್ತುವನ್ನು ಅದರ ಸ್ವಾಭಾವಿಕ ಪರಿಶುದ್ಧತೆಯಲ್ಲಿ ನೋಡಲು ಸಾಧ್ಯವಿರುವುದಿಲ್ಲ. ಆದ್ದರಿಂದಲೇ ಜನರು ಸಾಮಾನ್ಯವಾಗಿ ಜೀವನದ ಪ್ರಮುಖ ಮೌಲ್ಯಗಳನ್ನು ಮತ್ತು ಅಮೂಲ್ಯ ವಾಸ್ತವಿಕತೆಗಳನ್ನು ಅರಿಯುವಲ್ಲಿ ವಿಫಲರಾಗುತ್ತಾರೆ.

ಮಾನವನ ಸ್ವಭಾವ ಹೇಗಿರುತ್ತದೆ ಎಂದರೆ, ಅವನ ಪ್ರಾಕೃತಿಕ ಶಕ್ತಿ-ಸಾಮರ್ಥ್ಯಗಳನ್ನು ಬೆಳೆಸಲು ಶಿಕ್ಷಣ-ತರಬೇತಿಯ ಅಗತ್ಯ ತಲೆದೋರುತ್ತದೆ. ಅಲ್ಲಾಹನು ನಮ್ಮ ಮೇಲೆ ಕಡ್ಡಾಯಗೊಳಿಸಿರುವ ಉಪವಾಸ ವ್ರತವು ಒಂದು ಪವಿತ್ರವಾದ ಆರಾಧನೆಯಾಗಿರುವುದು ಮಾತ್ರವಲ್ಲ, ಅದು ನಮ್ಮ ತರಬೇತಿಯ ಅತ್ಯುತ್ತಮ ಮಾಧ್ಯಮವೂ ಆಗಿದೆ. ಉಪವಾಸ ವ್ರತದ ಮೂಲ ಉದ್ದೇಶ ಆತ್ಮಶುದ್ಧಿ ಮತ್ತು ಧರ್ಮನಿಷ್ಠೆಯಾಗಿದೆ. ಪರಿಶುದ್ಧತೆ ಗಳಿಸುವಲ್ಲಿ ಮತ್ತು ಧರ್ಮನಿಷ್ಠೆಯ ಅಪೇಕ್ಷಿತ ಸ್ಥಾನಕ್ಕೆ ತಲುಪುವಲ್ಲಿ ಉಪವಾಸವು ಒಂದು ಪ್ರಮುಖ ಮಾಧ್ಯಮದ ಸ್ಥಾನವನ್ನು ಹೊಂದಿದೆ. ಇದೇ ಕಾರಣವಾಗಿ ಉಪವಾಸ ವ್ರತವು ಗತ ಸಮುದಾಯಗಳ ಮೇಲೂ ಕಡ್ಡಾಯವಾಗಿತ್ತು.

ಆತ್ಮನಿಯಂತ್ರಣದ ಹೊರತು ಮಾನವನಲ್ಲಿ ಧರ್ಮನಿಷ್ಠೆಯ ಅವಸ್ಥೆಯು ಹುಟ್ಟಲಾರದು. ಉಪವಾಸವು ಆತ್ಮನಿಯಂತ್ರಣದ ಒಂದು ಸ್ವಾಭಾವಿಕ ಸಾಧನವಾಗಿದೆ. ಅದರ ಮೂಲಕ ಮಾನವನು ತನ್ನ ಚಿತ್ತಾಕಾಂಕ್ಷೆಗಳ ಮೇಲೆ ಹತೋಟಿಯನ್ನು ಸಾಧಿಸಬಲ್ಲನು.

ಚಿತ್ತಾಕಾಂಕ್ಷೆಯ ದಾಸನಿಗೆ ಅಲ್ಲಾಹನ ಘನತೆಯ ಬೋಧ ಇರುವುದಿಲ್ಲ. ಅವನ ಚಿತ್ತಾಕಾಂಕ್ಷೆಗಳು ಅವನನ್ನು ಜೀವನದ ಉನ್ನತ ವಾಸ್ತವಿಕತೆಗಳಿಂದ ಮತ್ತು ಮೂಲಭೂತ ಅಗತ್ಯಗಳಿಂದ ಅಲಕ್ಷ್ಯನನ್ನಾಗಿಸುತ್ತವೆ. ಅಲ್ಲಾಹನ ದೃಷ್ಟಿಯಲ್ಲಿ ತುಂಬಿದ ಹೊಟ್ಟೆಗಿಂತ ಹೆಚ್ಚಿನ ಅಪ್ರಿಯ ವಸ್ತು ಬೇರೆ ಇಲ್ಲ ಎಂದು ಹೇಳಲಾಗುತ್ತದೆ; ಹೊಟ್ಟೆ ತುಂಬಿದ ವ್ಯಕ್ತಿಯು ಆಲಸ್ಯ ಮತ್ತು ಅಲಕ್ಷ್ಯಕ್ಕೆ ತುತ್ತಾಗುತ್ತಾನೆ ಎಂಬುದೇ ಅದಕ್ಕೆ ಕಾರಣ. ಈ ಆಲಸ್ಯವು ಅವನನ್ನು ತನ್ನ ಪ್ರಾಕೃತಿಕ ಬೇಡಿಕೆಗಳ ಕಡೆಗೆ ಗಮನ ಹರಿಸುವುದರಿಂದ ತಡೆಯುತ್ತದೆ. ಉಪವಾಸ ವ್ರತವು ವಸ್ತುತಃ ಆಹಾರ–ಪಾನೀಯ ಸೇವನೆ ಮತ್ತು ಲೈಂಗಿಕೇಚ್ಛೆಯ ಈಡೇರಿಕೆಯ ಹೊರತಾಗಿಯೂ ಇತರ ಅನೇಕ ವಸ್ತು–ವಿಷಯಗಳು ನಮ್ಮ ಗಮನವನ್ನು ಬಯಸುತ್ತವೆ ಎಂಬುದನ್ನು ತೋರಿಸಲಿಕ್ಕಿರುವ ಪ್ರಾಯೋಗಿಕ ತರಬೇತಿಯಾಗಿದೆ.

ಉಪವಾಸವು ಪ್ರಭಾತದಿಂದ ಪ್ರದೋಷದ ತನಕ ಆಹಾರ–ಪಾನೀಯ ಸೇವನೆ ಮತ್ತು ಸಂಸರ್ಗದಿಂದ ದೂರವುಳಿಯುವುದರ ಹೆಸರಾಗಿ ಮೇಲ್ನೋಟಕ್ಕೆ ತೋರುತ್ತದೆ. ಆದರೆ ಆಧ್ಯಾತ್ಮಿಕ ನೆಲೆಯಲ್ಲಿ ನೋಡಿದರೆ, ಉಪವಾಸ ಎಂಬುದು ವ್ಯಕ್ತಿಗೆ ತನ್ನ ಚಿತ್ತಾಕಾಂಕ್ಷೆಗಳ ಮೇಲೆ ಹಿಡಿತ ಸಾಧಿಸುವ ಮತ್ತು ಅವನಿಗೆ ಧರ್ಮ ನಿಷ್ಠೆಯ ಜೀವನ ಗಳಿಸುವುದರ ಹೆಸರಾಗಿದೆ.

ಅದೆಷ್ಟೋ ಉಪವಾಸಿಗರು ಉಪ ವಾಸವಿರಿಸದವರ ಸಾಲಿನಲ್ಲಿ ಸೇರುತ್ತಾರೆ ಮತ್ತು ಉಪವಾಸವಿರಿಸದವರು ಉಪವಾಸಿಗರ ಸಾಲಿನಲ್ಲಿ ಸೇರುತ್ತಾರೆ ಎಂದು ಉಲೆಮಾಗಳು ಹೇಳಿರುವುದು ಇದೇ ಕಾರಣಕ್ಕಾಗಿದೆ. ಅಂದರೆ ಎಷ್ಟೋ ಮಂದಿ ಉಪವಾಸವಿರಿಸಿರುತ್ತಾರೆ; ಆದರೆ ವಾಸ್ತವದ ದೃಷ್ಟಿಯಲ್ಲಿ ನೋಡಿದರೆ ಅವರ ಉಪವಾಸವು ವ್ರತವಾಗಿರುವುದಿಲ್ಲ. ಏಕೆಂದರೆ ಧರ್ಮನಿಷ್ಠೆ ಮತ್ತು ಪರಿಶುದ್ಧತೆಯ ಜೀವನವು ಅವರದಾಗಿರುವುದಿಲ್ಲ.

ತದ್ವಿರುದ್ಧವಾಗಿ ಎಷ್ಟೋ ಮಂದಿ ಉಪವಾಸವಿರದಿದ್ದರೂ ವಾಸ್ತವಿಕ ದೃಷ್ಟಿಯಲ್ಲಿ ಉಪವಾಸಿಗರಲ್ಲಿ ಗುರುತಿಸಲ್ಪಡುತ್ತಾರೆ. ಏಕೆಂದರೆ ಅವರ ಕಿವಿಗಳು ಪರದೂಷಣೆಯಿಂದ ಮುಕ್ತವಾಗಿರುತ್ತದೆ, ಅವರ ದೃಷ್ಟಿಯು ಕರ್ಮ ಶುದ್ಧಿಯಾಗಿ

ರುತ್ತದೆ, ಅವರ ಜೀವನವು ಪರಿಶುದ್ಧತೆ ಮತ್ತು ದೇವನಿಷ್ಠೆಯ ದರ್ಪಣವಾಗಿರುತ್ತದೆ. ಇದು ನಮ್ಮಲ್ಲಿ ಹುಟ್ಟದಿದ್ದರೆ, ನಾವು ಉಪವಾಸವಿದ್ದೂ ಉಪವಾಸಿಗರಲ್ಲದವರ ಸಾಲಿನಲ್ಲಿ ಗುರುತಿಸಲ್ಪಡುವೆವು.

## ದೇವಚರರಿಗೆ ಹೋಲಿಕೆ

ಉಪವಾಸದಲ್ಲಿ ಮಾನವನಿಗೆ ದೇವಚರರಂತಹ ಗುಣವಿಶೇಷ ಲಭಿಸುತ್ತದೆ. ದೇವಚರರು ಆಹಾರ–ಪಾನೀಯದ ಎಲ್ಲ ಅಗತ್ಯಗಳಿಂದಲೂ ಮುಕ್ತವಾಗಿದ್ದಾರೆ. ಅಲ್ಲಾಹನ ಸ್ತುತಿ–ಕೀರ್ತನೆಯೇ ಅವರ ಆಹಾರವಾಗಿದೆ. ಉಪವಾಸದಲ್ಲಿ ಮಾನವನೂ ಚಿತ್ತಾಕಾಂಕ್ಷೆಗಳಿಂದ ದೂರವುಳಿದು ದೇವಾನುಸರಣೆ ಮತ್ತು ದೇವಾರಾಧನೆಯಲ್ಲಿ ತಲ್ಲೀನನಾಗುತ್ತಾನೆ.

## ಜಿಹಾದ್‌ನ ಆತ್ಮ

ಸತ್ಯಪ್ರೀತಿ ಮತ್ತು ಮಿಥ್ಯದ್ವೇಷವು ಮಾನವನ ಸ್ವಭಾವದ ಬೇಡಿಕೆಯಾಗಿದೆ. ಮಾನವನನ್ನು ನೇರ ಮಾರ್ಗದಿಂದ ತಪ್ಪಿಸಿ ಮಿಥ್ಯದ ಹಾದಿಗೆ ಕೊಂಡೊಯ್ಯಬಹುದಾದಂತಹ ಅವನ ಶಕ್ತಿ–ಸಾಮರ್ಥ್ಯ, ಚಿತ್ತಾಕಾಂಕ್ಷೆಗಳು ಮತ್ತು ಭಾವನೆಗಳ ಮೇಲೆ ಅವನು ಹತೋಟಿಯನ್ನು ಸಾಧಿಸಿದಾಗ ಮಾತ್ರವೇ ಸತ್ಯಪ್ರೀತಿಯ ಹಕ್ಕು ಸಂದಾಯ ಮಾಡಲು ಸಾಧ್ಯವಾಗುವುದು. ತನ್ನ ಶಕ್ತಿ–ಸಾಮರ್ಥ್ಯಗಳನ್ನು ನಿಯಂತ್ರಿಸಲಿಕ್ಕಾಗಿ ಸತತ ಪರಿಶ್ರಮ ಪಡಬೇಕಾದುದು ಪ್ರಾಥಮಿಕ ಶರ್ತವಾಗಿದೆ. ಉಪವಾಸ ವ್ರತಾಚರಿಸುತ್ತಾ ವ್ಯಕ್ತಿಯು ತನ್ನ ಚಿತ್ತದೊಂದಿಗೆ ಜಿಹಾದ್ ಪ್ರಾರಂಭಿಸುತ್ತಾನೆ. ಅಂತೆಯೇ ತನ್ನ ಚಿತ್ತವನ್ನು ಮಣಿಸಲಾಗದ ವ್ಯಕ್ತಿಯಿಂದ ಸತ್ಯದ ಪರ ಮತ್ತು ಮಿಥ್ಯದ ವಿರುದ್ಧ ಪರಿಶ್ರಮದ ನಿರೀಕ್ಷೆಯನ್ನು ಇರಿಸಲು ಸಾಧ್ಯವಿಲ್ಲ. ಸಹನೆ–ಸಂಯಮದ ಹೊರತು ಜಿಹಾದ್ ಸಾಧ್ಯವಿಲ್ಲ; ಅಂತೆಯೇ ಸಹನೆ–ಸಂಯಮವು ಉಪವಾಸ ವ್ರತದ ವಿಶೇಷತೆ ಗಳಲ್ಲೊಂದಾಗಿದೆ. ಆದ್ದರಿಂದಲೇ ಪ್ರವಾದಿವರ್ಯರು(ಸ) ಉಪವಾಸದ ತಿಂಗಳನ್ನು ಸಹನೆಯ ತಿಂಗಳು ಎಂದು ಬಣ್ಣಿಸಿದ್ದಾರೆ.

## ಹಿತಚಿಂತನೆ ಮತ್ತು ಸಹಾನುಭೂತಿ

ಹಸಿವು ಮತ್ತು ದಾಹದಿಂದ ಮಾನವನ ಅವಸ್ಥೆ ಏನಾಗುತ್ತದೆ ಎಂಬ ಅನುಭವವು ಸ್ಥಿತಿವಂತ ವ್ಯಕ್ತಿಗೂ ಉಪವಾಸ ವ್ರತದಿಂದ ಆಗುತ್ತದೆ. ಐಷಾರಾಮಿ ಜೀವನದಲ್ಲಿ ಮಾನವನಿಗೆ ಇತರರ ಸಂಕಷ್ಟಗಳು ಮತ್ತು ಹಸಿವು–ದಾಹದ ಅರಿವು ಉಂಟಾಗುವುದಿಲ್ಲ. ಇಂತಹ ಸ್ಥಿತಿಯಲ್ಲಿ ಅವನು ಮಾನವೀಯ ಹಿತಚಿಂತನೆ ಮತ್ತು ಸಹಾನುಭೂತಿಯ ಭಾವನೆಯಿಂದ ಸಂಪೂರ್ಣ ವಂಚಿತನಾಗುವ ಸಾಧ್ಯತೆ

ಇರುತ್ತದೆ. ಉಪವಾಸ ವ್ರತದ ಸ್ಥಿತಿಯಲ್ಲಿ ವ್ಯಕ್ತಿಗೆ ಹಸಿವು–ದಾಹದ ಪ್ರಾಯೋಗಿಕ ಅನುಭವವಾಗುತ್ತದೆ. ಅದರಿಂದಾಗಿ, ಬಡವರೊಂದಿಗೆ ಸಹಾನುಭೂತಿಯಿಂದ ವ್ಯವಹರಿಸುವ ಮತ್ತು ಅವರನ್ನು ಸಂಕಷ್ಟದಲ್ಲಿ ಸಹಾಯ ಮಾಡುವ ಭಾವನೆಯು ಸ್ವಾಭಾವಿಕವಾಗಿಯೇ ವ್ಯಕ್ತಿಯಲ್ಲಿ ಬೆಳೆಯುತ್ತದೆ. ಅಲ್ಲಾಹನ ಸಂದೇಶವಾಹಕರು(ಸ) ರಮಝಾನ್ ತಿಂಗಳನ್ನು 'ಸಹಾನುಭೂತಿ'ಯ ತಿಂಗಳು ಎಂದು ಹೇಳುತ್ತಿದ್ದರು ಮತ್ತು ಈ ತಿಂಗಳಲ್ಲಿ ಅವರು ಎಂದಿಗಿಂತ ಹೆಚ್ಚು ದಾನಿಯಾಗುತ್ತಿದ್ದರು.

## ಅಲ್ಲಾಹನ ಶ್ರೇಷ್ಠತೆಯ ಪ್ರಕಟನೆ

ಉಪವಾಸ ವ್ರತವು ಅಲ್ಲಾಹನ ಮಹಾನತೆ ಮತ್ತು ಶ್ರೇಷ್ಠತೆಯ ಪ್ರಕಟಣೆಯಾಗಿದೆ. ರಮಝಾನ್ ತಿಂಗಳಲ್ಲಿ ಒಂದೆಡೆ ಮಾನವನ ದಾಸ್ಯತನ ಮತ್ತು ವಿನೀತತೆಯು ಪ್ರಕಟವಾದರೆ, ಇನ್ನೊಂದೆಡೆ ಅಲ್ಲಾಹನ ಪ್ರಭುತ್ವ ಮತ್ತು ಮಹಾನತೆಯು ಪ್ರಕಟವಾಗುತ್ತದೆ.

## ಕೃತಜ್ಞತಾ ಭಾವ

ಉಪವಾಸ ವ್ರತವು 'ತಕ್ವಾ' ಗಳಿಕೆಯ ನಿಕಟ ಮಾಧ್ಯಮವಾಗಿರುವಂತೆಯೇ, ಕೃತಜ್ಞತೆಯ ಪ್ರಕಟವೂ ಆಗಿದೆ. ಇದರಲ್ಲಿ ಮಾನವರನ್ನು ಅಲ್ಲಾಹನಿಗೆ ಕೃತಜ್ಞ ದಾಸರಾಗಿಸುವ ವಿಶೇಷತೆಯು ಕಾಣಸಿಗುತ್ತದೆ. ಉಪವಾಸ ವ್ರತಕ್ಕೆ ಸಂಬಂಧಿಸಿ 'ನಿಮ್ಮಲ್ಲಿ ಧರ್ಮನಿಷ್ಠೆ ಉಂಟಾಗಬಹುದು' ಎಂದು ಹೇಳಿರುವಂತೆಯೇ ಈ ರೀತಿಯೂ ಉದ್ಧರಿಸಲಾಗಿದೆ, "ಸನ್ಮಾರ್ಗದರ್ಶನದ ಮೂಲಕ ನಿಮ್ಮನ್ನು ಪ್ರತಿಷ್ಠಿತಗೊಳಿಸಿದ ಅಲ್ಲಾಹನ ಮಹಿಮೆಯನ್ನು ಕೊಂಡಾಡುತ್ತಾ ಅವನಿಗೆ ಕೃತಜ್ಞರಾಗಿರಲಿಕ್ಕಾಗಿಯೂ ಈ ವಿಧಾನವನ್ನು ತೋರಿಸಿಕೊಡಲಾಗಿದೆ." **(ಅಲ್ ಬಕರ: 185)**

ಉಪವಾಸ ವ್ರತವು ಒಂದು ಪವಿತ್ರವಾದ ಆರಾಧನೆಯಾಗಿದೆ. ಅದರ ಸ್ಥಾನಮಾನವು ಕೇವಲ ತರಬೇತಿ ಕೋರ್ಸ್‌ಗೆ ಸೀಮಿತವಾಗಿಲ್ಲ. ಆದ್ದರಿಂದಲೇ ಉಪವಾಸ ವ್ರತವು ಕೃತಜ್ಞತಾ ಭಾವದ ಪ್ರಕಟಕ್ಕೂ ಹೇತುವಾಗುತ್ತದೆ. ಮಾನವ ಕುಲದ ಆರಂಭದಿಂದಲೇ ಮಾನವನ ಮೇಲೆ ಅಲ್ಲಾಹನು ವರ್ಷಿಸಿದ ಅನುಗ್ರಹಗಳಿಗೆ ಮಿತಿ ಇಲ್ಲ. ಅಲ್ಲಾಹನು ನಮಗೆ ಕುರ್‌ಆನನಂತಹ ಅನುಗ್ರಹವನ್ನು ದಯಪಾಲಿಸಿದುದಂತೂ ಅವನು ನಮ್ಮ ಮೇಲೆ ತೋರಿದ ಅತಿ ದೊಡ್ಡ ಕೃಪೆಯಾಗಿದೆ. ಕುರ್‌ಆನ್ ಮಾನವರ ಪಾಲಿಗೆ ಮಹಾನ್ ಅನುಗ್ರಹವೂ ಆಗಿದೆ. ಅದು ಮಾನವನಿಗೆ ಅಮರ ಜೀವನ ಮತ್ತು ಶಾಶ್ವತ ವಿಜಯದ ದಾರಿಯನ್ನು ತೋರಿಸಿತು; ಅಂತೆಯೇ ಮಾನವನು ಊಹಿಸಿರದಂತಹ ನೈತಿಕ ಉನ್ನತಿಗೆ ಅವನನ್ನು ಏರಿ

ಸಿತು. ಈ ಅನುಗ್ರಹಕ್ಕೆ ದಾಸನು ಉಪವಾಸ ವ್ರತಾಚರಿಸುತ್ತಾ ತನ್ನ ಸಂತೋಷ ಮತ್ತು ಕೃತಜ್ಞತೆಯನ್ನು ಪ್ರಕಟಿಸುತ್ತಾನೆ. ಒಟ್ಟಿನಲ್ಲಿ, ಮಾನವನ ಗೌರವ ಮತ್ತು ಘನತೆಯು ಅಲ್ಲಾಹನೊಂದಿಗಿನ ಅವನ ಸಂಬಂಧದಲ್ಲಿ ಗೋಚರಿಸುತ್ತದೆ.

ವಸ್ತುತಃ ಮಾನವ ಮತ್ತು ಅಲ್ಲಾಹನ ನಡುವೆ ಇರುವ ಸಂಬಂಧದ ಪ್ರಕಟ ದಲ್ಲಿಯೇ ಮಾನವನ ಸಂತೋಷದ ಪ್ರಕಟನೆಯು ಅಡಕವಾಗಿದೆ. ಇದೇ ಕಾರಣ ವಾಗಿ ನಾವು ಉಭಯ ಈದ್‌ಗಳ ಸಂದರ್ಭದಲ್ಲಿ ನಮ್ಮ ಸಂತೋಷವನ್ನು ವಿಶೇಷವಾದ ತಕ್ಬೀರ್ ಮತ್ತು ನಮಾಝ್‌ನ ಮೂಲಕ ಪ್ರಕಟಪಡಿಸುತ್ತೇವೆ. ಈ ನಮಾಝ್ ಮತ್ತು ತಕ್ಬೀರ್‌ಗಳು ಸಂತೋಷದ ಪ್ರಕಟನೆಯಾಗಿರುವುದರ ಜೊತೆಗೇ ಅಲ್ಲಾಹನ ಸನ್ನಿಧಿಯಲ್ಲಿ ದಾಸನ ಕೃತಜ್ಞತಾರ್ಪಣೆಯೂ ಆಗಿದೆ. ಇದೇ ರೀತಿ ಉಪವಾಸ ವ್ರತದಿಂದಲೂ ಕೃತಜ್ಞತೆಯ ಪ್ರಾಯೋಗಿಕ ಪ್ರಕಟನೆಯಾಗುತ್ತದೆ. ಅಲ್ಲಾಹನು ಪವಿತ್ರ ಕುರ್‌ಆನನ್ನು ಅವತೀರ್ಣಗೊಳಿಸುವ ಮೂಲಕ ದಾಸರ ಮೇಲಿನ ತನ್ನ ಅನುಗ್ರಹಗಳನ್ನು ಪರಿಪೂರ್ಣಗೊಳಿಸಿದನು. ದಾಸರೂ ಇದರ ಸಂತೊಷ ಮತ್ತು ಕೃತಜ್ಞತೆಯಲ್ಲಿ ಉಪವಾಸ ವ್ರತವನ್ನಾಚರಿಸುತ್ತಾರೆ; ಪರಿಪೂರ್ಣ ಪರಿಶುದ್ಧತೆಯೊಂದಿಗೆ ಅಲ್ಲಾಹನ ಕಡೆಗೆ ಗಮನ ಕೇಂದ್ರೀಕರಿಸುತ್ತಾರೆ.

## ವಿನಯಶೀಲತೆ

ಉಪವಾಸ ವ್ರತವು ಸಂಪೂರ್ಣವಾಗಿ ವಿನಯಶೀಲತೆಯ ಪ್ರಕಟನೆಯೂ ಆಗಿದೆ. ಪಾಪಗಳಿಗೆ ಪ್ರಾಯಃಶ್ಚಿತ್ತದಲ್ಲಿ ಉಪವಾಸ ವ್ರತಕ್ಕೆ ಮಹತ್ತರವಾದ ಪಾತ್ರವಿರುವುದಕ್ಕೆ ಇದುವೇ ಕಾರಣವಾಗಿದೆ. ಹೀಗೆ ಶರೀಅತ್‌ನಲ್ಲಿ ಪ್ರಾಯಶ್ಚಿತ್ತದ ರೂಪದಲ್ಲಿಯೂ ಉಪವಾಸ ವ್ರತಾಚರಿಸಲು ತಿಳಿಸಲಾಗಿದೆ.

ಉಪವಾಸ ವ್ರತವು ವಿನಯಶೀಲತೆಯ ಇನ್ನೊಂದು ಹೆಸರಾಗಿದೆ ಎಂಬುದಕ್ಕೆ ಗತ ದೇವಗ್ರಂಥಗಳಲ್ಲೂ ಸೂಚನೆ ಕಾಣಸಿಗುತ್ತದೆ. ಪ್ರಾರ್ಥನೆಯ ಸ್ವೀಕೃತಿ ಮತ್ತು ಅಲ್ಲಾಹನ ಕೃಪೆಯನ್ನು ತನ್ನೆಡೆಗೆ ತಿರುಗಿಸುವಲ್ಲಿ ಇದರ ಪಾತ್ರ ಬಹಳ ಹಿರಿದು. ಒಂದು ಉದ್ಧರಣೆ ಹೀಗಿದೆ, "ಯೆಹೋವನು ತನ್ನ ಸೈನ್ಯದ ಮುಂದೆ ದನಿ ಗೈಯುತ್ತಾನೆ; ಆತನ ದಂಡು ಬಹು ದೊಡ್ಡದು; ತನ್ನ ಮಾತನ್ನು ನೆರವೇರಿಸಿ ಕೊಳ್ಳುವಾತನು ಬಲಿಷ್ಠನಾಗಿದ್ದಾನೆ; ಯೆಹೋವನ ದಿನವು ಮಹತ್ತರವೂ ಅತಿ ಭಯಂಕರವೂ ಆಗಿದೆ; ಅದನ್ನು ತಾಳಿಕೊಳ್ಳುವವರು ಯಾರು? ಯೆಹೋವನು ಇಂತೆನ್ನುತ್ತಾನೆ: ಈಗಲಾದರೋ ನೀವು ಮನಃಪೂರ್ವಕವಾಗಿ ನನ್ನ ಕಡೆಗೆ ತಿರುಗಿ ಕೊಂಡು ಉಪವಾಸ ಮಾಡಿರಿ, ಅಳಿರಿ, ಗೋಳಾಡಿರಿ; ನಿಮ್ಮ ಬಟ್ಟೆಗಳನ್ನಲ್ಲ,

ನಿಮ್ಮ ಹೃದಯಗಳನ್ನು ಹರಿದುಕೊಂಡು ನಿಮ್ಮ ದೇವರಾದ ಯೆಹೋವನ ಕಡೆಗೆ ತಿರುಗಿಕೊಳ್ಳಿರಿ; ಆತನು ದಯೆಯೂ ಕನಿಕರವೂ ದೀರ್ಘ ಶಾಂತಿಯೂ ಮಹಾಕೃಪೆಯೂ ಉಳ್ಳವನಾಗಿ ಮಾಡಬೇಕೆಂದಿದ್ದ ಕೇಡಿಗೆ ಮನಮರುಗುತ್ತಾನೆ."

**(ಯೋವೇಲನು: 2: 11–13)**

## ನಮ್ಮ ಉಪವಾಸ ವ್ರತ

ಇಂದು ನಾವು ಉಪವಾಸ ವ್ರತಾಚರಿಸುತ್ತೇವೆ. ಆದರೂ ಅದರಿಂದ ಸ್ವಾಭಾವಿಕವಾಗಿಯೇ ಗಳಿಸಲು ಸಾಧ್ಯವಾಗುವಂತಹ ಪ್ರಯೋಜನಗಳು ಲಭಿಸುತ್ತಿಲ್ಲ. ವಾಸ್ತವದಲ್ಲಿ ನಾವು ಉಪವಾಸ ವ್ರತಾಚರಿಸುತ್ತೇವೆ; ಆದರೆ ಅದರ ಸಂಪೂರ್ಣ ಶಿಷ್ಟಾಚಾರವನ್ನು ಪಾಲಿಸುವುದಿಲ್ಲ ಎಂಬುದೇ ಕಾರಣವಾಗಿದೆ. ಉಪವಾಸದಲ್ಲಿ ನಾವು ಆಹಾರ–ಪಾನೀಯ ಸೇವನೆಯಿಂದ ದೂರವಿರುತ್ತೇವೆ; ಆದರೆ ನಮ್ಮನ್ನು ತಡೆದಿರುವಂತಹ ಅನೇಕ ವಿಷಯಗಳಿಂದ ನಾವು ದೂರವಿರುವುದಿಲ್ಲ. ಮೇಲ್ನೋಟಕ್ಕೆ ನಾವು ಉಪವಾಸಿಗರಾಗಿರುತ್ತೇವೆ; ಆದರೆ ನಮ್ಮ ಅಂಗಾಂಗಗಳು, ಮನಸ್ಸು, ಭಾವನೆಗಳು ಉಪವಾಸವಿರುವುದಿಲ್ಲ. ನಮ್ಮ ಕಾಲು, ದೃಷ್ಟಿಗಳು ಮತ್ತು ಹೃದಯ ವನ್ನು ಕೆಡುಕಿನಿಂದ ನಾವು ತಡೆಯುವುದಿಲ್ಲ; ನಮ್ಮ ನಾಲಗೆಯು ಕೆಟ್ಟ ಮಾತು, ಸುಳ್ಳು, ಪರನಿಂದೆ ಇತ್ಯಾದಿಗಳಿಂದ ಮುಕ್ತವಾಗಿರುವುದಿಲ್ಲ; ನಮ್ಮ ಕಿವಿಗಳು ಕೆಟ್ಟದರ ಕಡೆಗೆ ಆಹ್ವಾನಿಸುವವರ ಮಾತನ್ನು ಆಲಿಸುತ್ತವೆ ಹಾಗೂ ನಮ್ಮಲ್ಲಿ ಆಹಾರ–ಪಾನೀಯ, ಕೊಡು–ಕೊಳ್ಳುವಿಕೆ ಮತ್ತಿತರ ವ್ಯವಹಾರಗಳಲ್ಲಿ ಹಲಾಲ್–ಹರಾಮ್‌ಗಳ ಕಾಳಜಿ ಬಹಳ ಕಡಿಮೆ ಇರುತ್ತದೆ.

ಇಂತಹ ಸ್ಥಿತಿಯಲ್ಲಿ ನಾವು, ಉಪವಾಸ ವ್ರತದ ಫಲ ಮತ್ತು ಸಮೃದ್ಧಿಯನ್ನು ನಿರೀಕ್ಷಿಸುತ್ತಿದ್ದರೆ, ಅದು ನಮ್ಮ ಮೂರ್ಖತನವಾಗಿದೆ. ಉಪವಾಸದ ಶಿಷ್ಟಾಚಾರಗಳನ್ನು ಸಂಪೂರ್ಣ ಪಾಲಿಸುವುದೇ ನಿಜವಾದ ಉಪವಾಸ ವ್ರತವಾಗಿದೆ. ಇದರಿಂದಲೇ ಧರ್ಮನಿಷ್ಠ ಮತ್ತು ಉಪಕೃತವಾದ ಜೀವನವು ನಮ್ಮದಾಗುತ್ತದೆ.

ಪುರಾತನ ಗ್ರಂಥಗಳಲ್ಲೂ ಧರ್ಮನಿಷ್ಠೆ, ಸತ್ಸಂಕಲ್ಪ ಮತ್ತು ಉನ್ನತ ನೈತಿಕತೆ ಇಲ್ಲದಂತಹ ಉಪವಾಸ ವ್ರತವನ್ನು ನಿರರ್ಥಕವೆಂದು ಸಾರಲಾಗಿದೆ. ಕೆಲವು ಉದಾಹರಣೆಗಳನ್ನು ನೋಡೋಣ:

"ನೋಡಿರಿ, ನಿಮ್ಮ ಉಪವಾಸದ ಫಲವೇನೆಂದರೆ – ವ್ಯಾಜ್ಯ, ಕಲಹ, ಕೇಡಿನ ಗುದ್ದು, ಇವುಗಳೇ. ನೀವು ಈಗ ಮಾಡುವ ಉಪವಾಸವು ನಿಮ್ಮ ಪ್ರಾರ್ಥನೆಯನ್ನು ಉನ್ನತ ಲೋಕಕ್ಕೆ ಮುಟ್ಟಿಸತಕ್ಕದ್ದಲ್ಲ. ಮನುಷ್ಯನು ತನ್ನ ಆತ್ಮ

ವನ್ನು ಕುಂದಿಸಿಕೊಳ್ಳುವದಕ್ಕಾಗಿ ನಾನು ನೇಮಿಸಿದ ಉಪವಾಸದಿನವು ಇಂಥದೋ? ಒಬ್ಬನು ಜೊಂಡಿನಂತೆ ತಲೆಯನ್ನು ಬೊಗ್ಗಿಸಿಕೊಂಡು ಗೋಣೀ ತಟ್ಟನ್ನೂ ಬೂದಿಯನ್ನೂ ಆಸನ ಮಾಡಿಕೊಳ್ಳುವದು ಯೆಹೋವನಿಗೆ ಸಮರ್ಪಕವಾದ ಉಪವಾಸ ಎನ್ನುತ್ತೀರೋ?" **(ಯೆಶಾಯನು: 58: 4–5)**

"ಜನರು ನೋಡಲಿ ಎಂದು ನಿಮ್ಮ ಧರ್ಮಕಾರ್ಯಗಳನ್ನು ಅವರ ಮುಂದೆ ಮಾಡಬಾರದು, ನೋಡಿರಿ; ಹಾಗೆ ಮಾಡಿದರೆ ಪರಲೋಕದಲ್ಲಿರುವ ನಿಮ್ಮ ತಂದೆಯ ಹತ್ತರ ನಿಮಗೆ ಫಲ ದೊರೆಯದು." **(ಮತ್ತಾಯ: 6: 1)**

"ಇದಲ್ಲದೆ ನೀವು ಉಪವಾಸ ಮಾಡುವಾಗ ಕಪಟಿಗಳಂತೆ ಮುಖವನ್ನು ಸಪ್ಪಗೆ ಮಾಡಿಕೊಳ್ಳಬೇಡಿರಿ. ಅವರು ತಾವು ಉಪವಾಸಿಗಳೆಂದು ಜನರಿಗೆ ತೋರುವದಕ್ಕಾಗಿ ತಮ್ಮ ಮುಖವನ್ನು ವಿಕಾರ ಮಾಡಿಕೊಳ್ಳುತ್ತಾರೆ. ಅವರು ತಮಗೆ ಬರತಕ್ಕ ಫಲವನ್ನು ಹೊಂದಿದ್ದಾಯಿತೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಆದರೆ ನೀನು ಉಪವಾಸ ಮಾಡುವಾಗ ತಲೆಗೆ ಎಣ್ಣೆ ಹಚ್ಚಿಕೊಂಡು ಮುಖವನ್ನು ತೊಳಕೋ. ಹೀಗೆ ಮಾಡಿದರೆ ನೀನು ಉಪವಾಸಿಯೆಂದು ಜನರಿಗೆ ಕಾಣದೆ ಹೋದಾಗ್ಯೂ ಅಂತರಂಗದಲ್ಲಿರುವ ನಿನ್ನ ತಂದೆಗೆ ಉಪವಾಸಿಯೆಂದು ಕಾಣಿಸಿಕೊಳ್ಳುವಿ. ಅಂತರಂಗದಲ್ಲಿ ನಡೆಯುವದನ್ನು ನೋಡುವ ನಿನ್ನ ತಂದೆಯು ನಿನಗೆ ಫಲ ಕೊಡುವನು." **(ಮತ್ತಾಯ: 6: 16–18)**

ಒಂದು ವೇಳೆ ಉಪವಾಸ ವ್ರತದಿಂದ ಯಥಾರ್ಥ ಪ್ರಯೋಜನವನ್ನು ಪಡೆದದ್ದೇ ಆದರೆ, ಅದು ಉಪವಾಸಿಗನನ್ನು ಸದಾ ತನ್ನ ಹೊಣೆಗಾರಿಕಾ ಪ್ರಜ್ಞೆಯು ಜಾಗೃತವಾಗಿರುವಂತಹ ಸ್ಥಾನಕ್ಕೆ ಕೊಂಡೊಯ್ಯುತ್ತದೆ. ಅವನ ಹಗಲು–ರಾತ್ರಿಗಳು ಎಂದೂ ನಿರ್ಭಯ ಮತ್ತು ನಿಶ್ಚಿಂತೆಯಿಂದ ಕಳೆಯುವುದಿಲ್ಲ. ಕೆಲವೆಡೆ ಮಹಿಳೆಯರು ಬಾವಿಯಿಂದ ನೀರು ಸೇದಿ ಮನೆಗೆ ಕೊಂಡೊಯ್ಯುವುದನ್ನು ನೀವು ನೋಡಿರಬಹುದು. ನೀರು ತುಂಬಿದ ಒಂದು ಕೊಡಪಾನ ಅವರ ತಲೆ ಮೇಲಿದ್ದರೆ, ಇನ್ನೊಂದು ಅವರ ಬಗಲಲ್ಲಿರುತ್ತದೆ. ಮಹಿಳೆಯು ನೀರಿನ ಕೊಡಪಾನ ಹೊತ್ತುಕೊಂಡಿರುತ್ತಾಳೆ; ದಾರಿಯಲ್ಲಿ ಪರಿಚಯದ ಮಹಿಳೆ ಸಿಕ್ಕಾಗ ನಿಂತು ಅವಳೊಡನೆ ಮಾತನಾಡಲು ತೊಡಗುತ್ತಾಳೆ; ಮಾತುಕತೆಯ ವೇಳೆ ಕೊಡಪಾನವು ತಲೆ ಮೇಲಿರುತ್ತದೆ; ಅದರಿಂದ ಕೈಯನ್ನು ಸರಿಸಿರುತ್ತಾಳೆ; ಆದರೆ ತಲೆಯಿಂದ ಕೊಡಪಾನ ಬಿದ್ದರೆ ನೋಡಿ! ಮೇಲ್ನೋಟಕ್ಕೆ ಅವಳು ಮಾತುಕತೆಯಲ್ಲಿ ವ್ಯಸ್ತಳಾಗಿರುತ್ತಾಳೆ; ಆದರೆ ಅವಳ ಗಮನವು ತಲೆಮೇಲಿರುವ ಕೊಡಪಾನದಿಂದ ತಪ್ಪಿರುವುದಿಲ್ಲ; ಅವಳಿಗೆ ತನ್ನ ಕೊಡಪಾನದ ಬಗ್ಗೆ ಕಾಳಜಿಯೂ ಇರುತ್ತದೆ;

ಇದೇ ಕಾರಣವಾಗಿ ಕೊಡಪಾನವು ಬೀಳದೆ ನಿಂತಿರುತ್ತದೆ. ಉಪವಾಸ ವ್ರತದ ಸ್ಥಿತಿಯೂ ಇದೇ ಆಗಿದೆ. ಉಪವಾಸಿಗನಲ್ಲಿ ತಾನು ಉಪವಾಸಿಗನೆಂಬ ಪ್ರಜ್ಞೆ ಸದಾ ಇರಬೇಕು. ಅವನು ತನ್ನ ಉಪವಾಸ ವ್ರತದಿಂದ ಅಲಕ್ಷ್ಯನಾಗಿರಬಾರದು. ಉಪವಾಸದ ರಕ್ಷಣೆಯನ್ನು ತನ್ನ ಕರ್ತವ್ಯವೆಂದು ಭಾವಿಸಬೇಕು. ತನ್ನ ಹೊಣೆಗಾರಿಕೆಯು ಉಪವಾಸದ ಬಾಹ್ಯ ಶಿಷ್ಟಾಚಾರ ಮತ್ತು ಶರ್ತಗಳ ಮೇಲ್ನೋಟ ವಹಿಸುವುದಷ್ಟೇ ಅಲ್ಲ, ಬದಲಾಗಿ ಅದಕ್ಕೂ ಮಿಗಿಲಾಗಿ ಉಪವಾಸದ ಮೂಲ ಉದ್ದೇಶದಿಂದ ಅಲಕ್ಷ್ಯನಾಗದಿರುವುದೂ ತನ್ನ ಹೊಣೆಯಾಗಿದೆ ಎಂದು ಅರಿತ ವ್ಯಕ್ತಿಯು ನಿಜಾರ್ಥದಲ್ಲಿ ಯಶಸ್ವಿಯಾದನು. ನಿಮಗೆ ಗೊತ್ತೇ? ಉಪವಾಸದ ಉದ್ದೇಶವು ಕೇವಲ ಉಪವಾಸದ ಕಾಲಕ್ಕೆ ಸೀಮಿತವಲ್ಲ, ಬದಲಾಗಿ ಅದು ಮಾನವನ ಇಡೀ ಜೀವನಕ್ಕೆ ಸಂಬಂಧಿಸಿದೆ.



# ಉಪವಾಸ ವ್ರತ: ಒಂದು ಸ್ವಾಭಾವಿಕ ಪರಿಶ್ರಮ

ಇಸ್ಲಾಮೀ ಆರಾಧನೆ ಮತ್ತು ಇಸ್ಲಾಮೇತರ ಆರಾಧನೆಗಳಲ್ಲಿ ಬಹಳ ವ್ಯತ್ಯಾಸ ವಿರುತ್ತದೆ. ಇಸ್ಲಾಮೀ ಆರಾಧನೆಯು ಸ್ವಾಭಾವಿಕವಾಗಿರುವ ಕಾರಣ ಸಾದ್ಯಂತ ಸಂತುಲಿತವಾಗಿರುತ್ತದೆ. ಇಸ್ಲಾಮಿನಲ್ಲಿ ಉಪವಾಸ ವ್ರತದ ಉದ್ದೇಶವು ದೇಹ ದಂಡನೆಯೋ ದೇಹಕ್ಕೆ ಕಷ್ಟ ಕೊಡುವುದೋ ಅಲ್ಲ; ಬದಲಾಗಿ ಅದರಿಂದ ಕೇವಲ ಸಂಸ್ಕರಣೆ ಮತ್ತು ತರಬೇತಿ ಹಾಗೂ ದೇವಸಾಮಿಪ್ಯವನ್ನೇ ಉದ್ದೇಶಿಸಲಾಗಿದೆ. ಪವಿತ್ರ ಕುರ್‌ಆನ್‌ನಲ್ಲಿ ಹೀಗೆ ಹೇಳಲಾಗಿದೆ, "ಅಲ್ಲಾಹನು ನಿಮಗೆ ಸೌಲಭ್ಯ ವನ್ನೀಯಲು ಬಯಸುತ್ತಾನೆ; ನಿಮ್ಮನ್ನು ಕಷ್ಟಕ್ಕೀಡು ಮಾಡಲು ಇಚ್ಛಿಸುವುದಿಲ್ಲ."
**(ಅಲ್ ಬಕರ: 185)**

ಆದ್ದರಿಂದಲೇ ಇತರ ಧರ್ಮಗಳಲ್ಲಿ ದೇವಸಾಮಿಪ್ಯಕ್ಕಾಗಿ ಅನುಸರಿಸಲಾಗುವ ಉಗ್ರ ಸಂಯಮವನ್ನು ಇಸ್ಲಾಮಿನಲ್ಲಿ ನಿಷೇಧಿಸಲಾಗಿದೆ. ಹಿಂದೆ ಉಪವಾಸ ವ್ರತವು ಅಹರ್ನಿಶಿಯಾಗಿರುತ್ತಿತ್ತು. ಕುರ್‌ಆನ್ ಅದನ್ನು ಪ್ರಭಾತದಿಂದ ಮುಸ್ಸಂಜೆಯ ತನಕ ಸೀಮಿತಗೊಳಿಸಿತು. "...ಮತ್ತು ಇರುಳಿನ ಕರಿರೇಖೆಯಿಂದ ಉಷಾಕಾಲದ ಬಿಳಿರೇಖೆಯು ನಿಮಗೆ ಬೇರ್ಪಟ್ಟು ತೋರುವ ವರೆಗಿನ ನಿಶಾವಧಿಯಲ್ಲಿ ತಿನ್ನಿರಿ ಮತ್ತು ಕುಡಿಯಿರಿ. ಅನಂತರ ಈ ಕಾರ್ಯಗಳನ್ನೆಲ್ಲಾ ಬಿಟ್ಟು, ರಾತ್ರಿಯ ವರೆಗೆ ನಿಮ್ಮ ಉಪವಾಸ ವ್ರತವನ್ನು ಪೂರ್ತಿಗೊಳಿಸಿರಿ." **(ಅಲ್ ಬಕರ: 187)**

ಅಲ್ಲಾಹನ ಸಂದೇಶವಾಹಕರು(ಸ) ಹೇಳುತ್ತಾರೆ, "ಯಾರು ನಿರಂತರ ಉಪವಾಸ ವ್ರತಾಚರಿಸಿದನೋ ಅವನು ನಿಜಾರ್ಥದಲ್ಲಿ ಉಪವಾಸ ಆಚರಿಸಲೇ ಇಲ್ಲ." **(ಬುಖಾರಿ, ಮುಸ್ಲಿಮ್)**

ವೈರಾಗ್ಯ ಮತ್ತು ಧರ್ಮನಿಷ್ಠೆಯ ಹಾದಿಯಲ್ಲಿ ಜೀವನ ಪರ್ಯಂತ ಉಪವಾಸ ವ್ರತಾಚರಿಸಲು ಬಯಸುವವರನ್ನು ಇಸ್ಲಾಮ್ ತಡೆಯಿತು ಮತ್ತು

ಹೀಗೆ ಉಪದೇಶಿಸಿತು – ವ್ಯಕ್ತಿಯ ಮೇಲೆ ಅವನ ದೇಹದ ಹಕ್ಕು ಕೂಡ ಇದೆ ಮತ್ತು ಅವನ ಮೇಲೆ ಅವನನ್ನು ಸಂಧಿಸುವವರ ಹಕ್ಕೂ ಇದೆ. ಆದ್ದರಿಂದ ಅವನು ಉಪವಾಸ ವ್ರತಾಚರಿಸಲೂ ಬೇಕು ಮತ್ತು ಆಹಾರಪಾನೀಯ ಸೇವಿಸಲೂ ಬೇಕು, ರಾತ್ರಿಯ ವೇಳೆ ವಿಶ್ರಾಂತಿಯನ್ನು ಪಡೆಯಲೂ ಬೇಕು ಮತ್ತು ದೇವಸನ್ನಿಧಿಯಲ್ಲಿ ನಿಂತು ಆರಾಧಿಸಲೂ ಬೇಕು. ನಿರಂತರ ಉಪವಾಸ ವ್ರತಾಚರಿಸು ವುದು ಅಥವಾ ತನ್ನ ದೇಹಕ್ಕೆ ಎಳ್ಳಷ್ಟೂ ವಿಶ್ರಾಂತಿ ನೀಡದಿರುವುದು ಇಸ್ಲಾಮೀ ಶಿಕ್ಷಣಕ್ಕೆ ವಿರುದ್ಧವಾಗಿದೆ.

ಅಜ್ಞಾನ ಕಾಲದಲ್ಲಿ ಜನರು ಉಪವಾಸದ ರಾತ್ರಿಗಳಲ್ಲಿ ಶಹಶಯನದಿಂದ ದೂರವಿರುತ್ತಿದ್ದರು. ಅದು ವಸ್ತುತಃ ಪ್ರಕೃತಿಗೆ ವಿರುದ್ಧವಾದುದಾಗಿತ್ತು. ಹಾಗಾಗಿ ಹಲವೊಮ್ಮೆ ಜನರಿಂದ ಈ 'ತಪ್ಪು' ಸಂಭವಿಸಿ ಹೋಗುತ್ತಿತ್ತು. ಅದೇ ವೇಳೆ ಈ ಶಹಶಯನವನ್ನು ಉಪವಾಸದ ದಿನದ ಹಗಲು ಹೊತ್ತಿನಲ್ಲಿ ಮಾತ್ರವೇ ನಿಷೇಧಿಸಲಾಗಿದೆ, ರಾತ್ರಿಯ ವೇಳೆ ಪತ್ನಿಯರೊಡನೆ ಸಹಶಯನ ನಡೆಸಬಹುದೆಂದು ಕುರ್‌ಆನ್ ಹೇಳಿತು.

"ಉಪವಾಸ ವ್ರತದಂದು ರಾತ್ರಿಕಾಲದಲ್ಲಿ ನೀವು ನಿಮ್ಮ ಪತ್ನಿಯರೊಂದಿಗೆ ಸಂಪರ್ಕ ಇಟ್ಟುಕೊಳ್ಳುವುದನ್ನು 'ಧರ್ಮಸಮ್ಮತ'ಗೊಳಿಸಲಾಗಿರುತ್ತದೆ. ಅವರು ನಿಮಗೆ ಉಡುಪಾಗಿರುವವರು ಮತ್ತು ನೀವು ಅವರಿಗೆ ಉಡುಪಾಗಿರುವಿರಿ. ನೀವು ರಹಸ್ಯವಾಗಿ ಆತ್ಮವಂಚನೆ ಮಾಡುತ್ತಿದ್ದುದು ಅಲ್ಲಾಹನಿಗೆ ತಿಳಿಯಿತು. ಆದರೆ, ಅಲ್ಲಾಹನು ನಿಮ್ಮ ಪಶ್ಚಾತ್ತಾಪವನ್ನು ಸ್ವೀಕರಿಸಿ ನಿಮ್ಮನ್ನು ಕ್ಷಮಿಸಿರುತ್ತಾನೆ. ಇನ್ನು ನೀವು ಅವರೊಂದಿಗೆ ರಮಿಸಿರಿ ಮತ್ತು ಅಲ್ಲಾಹನು ನಿಮಗೆ ನಿಯತಗೊಳಿಸಿದ ಸವಿಯನ್ನನುಭವಿಸಿಕೊಳ್ಳಿರಿ..." (ಅಲ್ ಬಕರ: 187)

ಒಂದು ಯಾತ್ರೆಯ ವೇಳೆ ಬಹಳ ಬಳಲಿದ ವ್ಯಕ್ತಿಯನ್ನು ಪ್ರವಾದಿವರ್ಯರು(ಸ) ಕಂಡರು. ಜನರು ಆತನ ಮೇಲೆ ನೆರಳನ್ನು ಮಾಡಿಕೊಂಡಿದ್ದರು. ಪ್ರವಾದಿ(ಸ) ಹೇಳಿದರು, "ಪ್ರಯಾಣದ ವೇಳೆ (ದೇಹದ ಸಾಮಾನ್ಯ) ಶಕ್ತಿಯು ಕುಂದಿ ಹೋಗುವಂತೆ ಉಪವಾಸ ವ್ರತಾಚರಿಸುವುದರಲ್ಲಿ ಯಾವುದೇ ಒಳಿತು ಇಲ್ಲ."

(ಬುಖಾರಿ, ಮುಸ್ಲಿಮ್)

ಓರ್ವ ಸಹಾಬಿಯು ವರ್ಷ ಪೂರ್ತಿ ಉಪವಾಸ ವ್ರತಾಚರಿಸಿದ್ದರು. ಅದ ರಿಂದಾಗಿ ಅವರ ರೂಪವೇ ಬದಲಾಗಿ ಬಿಟ್ಟಿತ್ತು. ಪ್ರವಾದಿವರ್ಯರಿಗೆ(ಸ) ಈ ವಿಷಯ ತಿಳಿದಾಗ ಅವರೊಡನೆ ಕೇಳಿದರು, "ನಿಮ್ಮನ್ನು ನೀವೇ ಯಾತನೆಗೆ

ಯಾಕೆ ಗುರಿಪಡಿಸಿದಿರಿ? (ಅಂದರೆ ನಿಮ್ಮ ಮೇಲೆ ಸಂಕಷ್ಟ ಹೇರಲು ಅಲ್ಲಾಹ್ ಯಾವಾಗ ಆದೇಶಿಸಿದನು?" (ಅಬೂದಾವೂದ್)

ಪ್ರಯಾಣಿಕರಿಗೆ ಉಪವಾಸ ತೊರೆಯಲು ಮತ್ತು ಪ್ರಯಾಣದಿಂದ ಮರಳಿದ ಮೇಲೆ ಬಿಟ್ಟು ಹೋದ ಉಪವಾಸವನ್ನು ಇತರ ದಿನಗಳಲ್ಲಿ ಪೂರ್ತಿಗೊಳಿಸಲು ಅನುಮತಿಯನ್ನು ನೀಡಲಾಗಿದೆ. ಅದೇ ರೀತಿ ದುರ್ಬಲರು ಮತ್ತು ರೋಗಿಗಳಿಗೆ ಕೂಡ ಶರೀಅತ್ ರಿಯಾಯಿತಿಯನ್ನು ನೀಡಿದೆ.

ಉಪವಾಸದ ದಿನಗಳಲ್ಲಿ ಹಗಲು ಹೊತ್ತು ಉಣ್ಣುವ ಮತ್ತು ಕುಡಿಯುವುದರಿಂದ ತಡೆಯಲಾಗಿರುವುದೇನೋ ಸರಿ, ಅದರ ಜೊತೆಗೇ ಅಲ್ಲಾಹನ ಸಂದೇಶವಾಹಕರು(ಸ) ಈ ರೀತಿ ಹೇಳಿರುವರು, "ಸಹ್ರಿ (ಉಷಾಪೂರ್ವ ಭೋಜನ) ಉಣ್ಣಿರಿ. ಏಕೆಂದರೆ ಸಹ್ರಿಯಲ್ಲಿ ಸಮೃದ್ಧಿಯಿದೆ." (ಬುಖಾರಿ, ಮುಸ್ಲಿಮ್)

ಇನ್ನೊಂದು ಸಂದರ್ಭದಲ್ಲಿ ಹೇಳಿದರು, "ಹಗಲು ಹೊತ್ತು (ಹಸಿವೆಯಿಂದ) ಕಳೆಯಲು ಸಹ್ರಿಯಿಂದ ಸಹಾಯ ಪಡೆಯಿರಿ ಮತ್ತು ರಾತ್ರಿ ನಮಾಝ್ (ತಹಜ್ಜುದ್)ಗಾಗಿ ಹಗಲಲ್ಲಿ ಲಘು ವಿಶ್ರಾಂತಿಯಿಂದ ಸಹಾಯ ಪಡೆಯಿರಿ."

ಅಂದರೆ ಸಹ್ರಿ ಉಣ್ಣುವುದರಿಂದ ಉಪವಾಸ ವ್ರತಾಚರಿಸಲು ನಿಮಗೆ ಸುಲಭವಾಗುವುದು. ಉಪವಾಸವಿರುತ್ತಾ ನೀವು ಅಲ್ಲಾಹನ ಆರಾಧನೆ ಮತ್ತಿತರ ಅಗತ್ಯದ ಕಾರ್ಯಗಳನ್ನು ನೀವು ಸುಲಭವಾಗಿ ನೆರವೇರಿಸಬಲ್ಲಿರಿ. ಇದು ನಿಮಗೆ ಸಮೃದ್ಧಿಗೆ ಹೇತುವಾಗುವುದು.

ಅದೇ ರೀತಿ ಅಲ್ಲಾಹನ ಸಂದೇಶವಾಹಕರು(ಸ) ಹೀಗೆಂದಿರುವರು, "ಜನರು ಇಫ್ತಾರ್ (ಪಾರಣೆ) ವೇಳೆ ತ್ವರೆ ಮಾಡುತ್ತಿರುವಷ್ಟು ಸಮಯ ಉತ್ತಮ ಸ್ಥಿತಿಯಲ್ಲಿರುವರು." (ಬುಖಾರಿ, ಮುಸ್ಲಿಮ್)

ಒಟ್ಟಿನಲ್ಲಿ ಉಪವಾಸ ವ್ರತದ ಉದ್ದೇಶವು ಮಾನವನ ಸಂಸ್ಕರಣೆ ಮತ್ತು ತರಬೇತಿಯಾಗಿದೆಯೇ ಹೊರತು ದೇಹದಂಡನೆಯಲ್ಲ ಎಂಬುದು ಮೇಲಿನ ವಿವರಣೆಯಿಂದ ತಿಳಿದು ಬರುತ್ತದೆ. ಆತ್ಮಸಂಸ್ಕರಣೆಗೆ ಆತ್ಮನಿಯಂತ್ರಣ, ಕಠಿಣ ಪರಿಶ್ರಮ ಮತ್ತು ತಪಶ್ಚರ್ಯೆಯ ಅಗತ್ಯ ತಲೆದೋರುತ್ತದೆ. ಉಪವಾಸ ವ್ರತವು ಒಂದು ಸಂತುಲಿತ ಮತ್ತು ಸ್ವಾಭಾವಿಕವಾದ ಪರಿಶ್ರಮ ಮತ್ತು ತಪಶ್ಚರ್ಯೆಯಾಗಿದೆ.



# ಉಪವಾಸ ವ್ರತ ಮತ್ತು ಆತ್ಮಸಂಸ್ಕರಣೆ

ರಮಝಾನ್ ತಿಂಗಳು ಬಹಳ ಸಮೃದ್ಧವಾದ ತಿಂಗಳಾಗಿದೆ. ಈ ತಿಂಗಳಲ್ಲಿಯೇ ಪವಿತ್ರ ಕುರ್‌ಆನ್‌ನ ಅವತೀರ್ಣ ಆರಂಭವಾಗಿತ್ತು. ಅದಾದರೋ ಮಾನವರಿಗೆ ಸಾದ್ಯಂತ ಮಾರ್ಗದರ್ಶಕ ಗ್ರಂಥವಾಗಿದೆ. ಅದರ ಬೆಳಕಿನಲ್ಲಿ ಮಾನವನು ನೇರ ಮಾರ್ಗವನ್ನು ಅಂದರೆ ಸರಿಯಾದ ಮಾರ್ಗವನ್ನು ಕಂಡುಕೊಳ್ಳಬಲ್ಲನು. ಅದನ್ನು ಅನುಸರಿಸಿ ಮಾನವನು ಯಶಸ್ಸಿನ ಪಯಣವನ್ನು ದಾಟಬಲ್ಲನು. ಅದೇ ರೀತಿ ವೈಚಾರಿಕ ಮತ್ತು ತಾತ್ವಿಕ ಪಥಭ್ರಷ್ಟತೆ, ಪ್ರಾಯೋಗಿಕ ಪಥಭ್ರಷ್ಟತೆ ಮುಂತಾದವುಗಳನ್ನು ಅರಿತು ಅವುಗಳಿಂದ ಸುರಕ್ಷಿತವಾಗಿರಬಲ್ಲನು. ಲೋಕದಲ್ಲಿರುವ ವಿವಿಧ ಚಿಂತನೆ ಮತ್ತು ಸಿದ್ಧಾಂತಗಳಲ್ಲಿ ಸರಿಯಾದ ಸಿದ್ಧಾಂತ ಯಾವುದೆಂಬುದನ್ನು ಪವಿತ್ರ ಕುರ್‌ಆನ್ ತಿಳಿಸಿ ಕೊಡುತ್ತದೆ. ವಿಭಿನ್ನವಾದ ಭಾವನೆ ಮತ್ತು ಸಂವೇದನೆಗಳಲ್ಲಿ ಸರಿಯಾದ ಮತ್ತು ಅಮೂಲ್ಯವಾದ ಭಾವನೆ ಯಾವುದೆಂಬುದನ್ನು ತಿಳಿಸಿಕೊಡುತ್ತದೆ. ವಿಭಿನ್ನ ರೀತಿಯ ಕಾರ್ಯವಿಧಾನಗಳಲ್ಲಿ ಮಾನವನ ಮಟ್ಟಿಗೆ ಸರಿಯಾದ ಮತ್ತು ಸ್ವಾಭಾವಿಕವಾದ ಕಾರ್ಯವಿಧಾನವು ಏನೆಂಬುದನ್ನು ಕಲಿಸಿ ಕೊಡುತ್ತದೆ. ಒಟ್ಟಿನಲ್ಲಿ ಜ್ಞಾನ, ಅಂತರ್ದೃಷ್ಟಿ, ಯುಕ್ತಿ ಮತ್ತು ಪರಿಶುದ್ಧ ಜೀವನದ ಕಡೆಗೆ ಆಹ್ವಾನಿಸುವ ಪವಿತ್ರ ಕುರ್‌ಆನ್ ಮಾನವ ಕುಲದ ಮಟ್ಟಿಗೆ ಒಂದು ಪರಿಪೂರ್ಣವಾದ ಮಾರ್ಗದರ್ಶಕ ಗ್ರಂಥವಾಗಿದೆ. ಅದು ವೈಚಾರಿಕ ಮತ್ತು ಪ್ರಾಯೋಗಿಕ ಭಿನ್ನತೆ ಹಾಗೂ ಅಸ್ತವ್ಯಸ್ತತೆಯಿಂದ ರಕ್ಷಿಸುತ್ತದೆ. ಅಂತೆಯೇ ಅನುಪಮವಾದ ವೈಚಾರಿಕ ಮತ್ತು ಪ್ರಾಯೋಗಿಕ ವ್ಯವಸ್ಥೆಯನ್ನು ತೋರಿಸಿ ಕೊಡುತ್ತದೆ. ಅದಕ್ಕಿಂತ ಉತ್ತಮವಾದ ಮತ್ತು ಸ್ವಾಭಾವಿಕವಾದ ವ್ಯವಸ್ಥೆಯನ್ನು ಮಾನವ ಚಿತ್ತವು ಕಲ್ಪಿಸಲೂ ಸಾಧ್ಯವಿಲ್ಲ. ಪವಿತ್ರ ಕುರ್‌ಆನ್ ಕಲಿಸುವ ಕರ್ಮವಿಧಾನವು ಎಲ್ಲ ರೀತಿಯ ಕುಂದುಕೊರತೆಯಿಂದ ಮುಕ್ತವಾದ ಸಂತುಲಿತ ಮತ್ತು ಪರಿಪೂರ್ಣ ವ್ಯವಸ್ಥೆಯಾಗಿದೆ.

ಪವಿತ್ರ ಕುರ್‌ಆನ್ ಮಾನವನ ಜೀವನದಲ್ಲಿ ಅತಿ ಹೆಚ್ಚು ಮಹತ್ವ ಕಲ್ಪಿಸಿರುವುದು

ಅವನ ವ್ಯಕ್ತಿತ್ವಕ್ಕಾಗಿದೆ. ವ್ಯಕ್ತಿತ್ವ ನಿರ್ಮಾಣವೇ ಅದರ ಎಲ್ಲ ಶಿಕ್ಷಣದ ಸಾರವಾಗಿದೆ. ಅದೇ ವ್ಯಕ್ತಿತ್ವ ಮತ್ತು ಚಾರಿತ್ರ್ಯ ನಿರ್ಮಾಣವನ್ನೇ ಪವಿತ್ರ ಕುರ್‌ಆನ್ ಆತ್ಮಸಂಸ್ಕರಣೆ ಎಂದು ಬಣ್ಣಿಸಿದೆ. ಈ ಸಂಸ್ಕರಣೆಯೇ ಜೀವನೋದ್ದೇಶ ಮತ್ತು ಕುರ್‌ಆನ್ ಶಿಕ್ಷಣದ ಸಾರವಾಗಿದೆ. ಆದ್ದರಿಂದಲೇ ಅದರ ಗಳಿಕೆಯನ್ನು ಕುರ್‌ಆನ್ ಯಶಸ್ಸು ಮತ್ತು ಮೋಕ್ಷವೆಂದು ಸಾರಿದೆ. ಹಾಗಾಗಿ ಪವಿತ್ರ ಕುರ್‌ಆನ್ ಹೇಳುತ್ತದೆ, "ತನ್ನನ್ನು ಸಂಸ್ಕರಿಸಿಕೊಂಡವನು ಯಶಸ್ವಿಯಾಗಿ ಬಿಟ್ಟನು." (ಅಲ್ ಅಅ್‌ಲಾ: 14)

ಇನ್ನೊಂದೆಡೆ ಹೀಗೆನ್ನಲಾಗಿದೆ, "(ಅವರಿಗೆ) ಸದಾ ಹಸಿರಾಗಿರುವ ಉದ್ಯಾನಗಳಿರುವುದು. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅವರು ಅವುಗಳಲ್ಲಿ ಸದಾಕಾಲ ವಾಸಿಸುತ್ತಿರುವರು. ತನ್ನನ್ನು ಪರಿಶುದ್ಧಗೊಳಿಸುವವನಿಗೆ ಪ್ರತಿಫಲವಿದು." (ತಾಹಾ: 76)

ಮತ್ತೊಂದೆಡೆ ಹೀಗೆನ್ನಲಾಗಿದೆ, "ಖಂಡಿತವಾಗಿಯೂ ತನ್ನ ಆತ್ಮವನ್ನು ಸಂಸ್ಕರಿಸಿಕೊಂಡವನು ವಿಜಯಿಯಾದನು ಮತ್ತು ಅದನ್ನು ದಮನಿಸಿದವನು ಸೋಲುಂಡನು." (ಅಶ್ಶಮ್ಸ್: 9–10)

ಪವಿತ್ರ ಕುರ್‌ಆನಿನ ಬೋಧನೆಗಳ ಮೂಲ ಉದ್ದೇಶ ಆತ್ಮಸಂಸ್ಕರಣೆಯ ಹೊರತು ಬೇರೇನಲ್ಲ ಎಂದು ಇದರಿಂದ ತಿಳಿದು ಬರುತ್ತದೆ. ಈ ಉದ್ದೇಶವು ಎಷ್ಟು ಸುಂದರ ಮತ್ತು ಆಹ್ಲಾದಕರವಾಗಿದೆ ಎಂಬುದನ್ನು ಪ್ರತಿಯೊಬ್ಬ ಸಂವೇದನಾಶೀಲ ವ್ಯಕ್ತಿಯೂ ಅರ್ಥ ಮಾಡಬಲ್ಲ. ನಮ್ಮ ವ್ಯಕ್ತಿತ್ವದಲ್ಲಿ ಪ್ರಗತಿಯ ಯಾವ ಸಾಧ್ಯತೆಗಳಿವೆಯೋ ಅವು ದಮನಿಸಲ್ಪಟ್ಟಿರಬಾರದು, ಬದಲಾಗಿ ಅವು ವ್ಯಕ್ತವಾಗಬೇಕು ಎಂಬುದೇ ಆತ್ಮಸಂಸ್ಕರಣೆಯ ವ್ಯಾಖ್ಯಾನವಾಗಿದೆ. ಅದನ್ನು ಒಂದು ಉದಾಹರಣೆಯಿಂದ ಅರ್ಥ ಮಾಡಬಹುದಾಗಿದೆ:

ಗುಲಾಬಿಯ ಒಂದು ಸಣ್ಣ ಗಿಡದಲ್ಲಿ ಬೆಳೆದು ಗೆಲ್ಲುಗಳು ಹುಟ್ಟಿಕೊಳ್ಳುವ, ಮೊಗ್ಗುಗಳು ಹುಟ್ಟಿಕೊಳ್ಳುವ ಮತ್ತು ಒಂದು ದಿನ ಆ ಮೊಗ್ಗುಗಳು ಬಿರಿದು ಸುಂದರ ಹೂವುಗಳು ಅರಳಿ ಕಂಪನ್ನು ಬೀರುವ ಸಾಧ್ಯತೆ ಇದೆ. ಹಾಗೊಂದು ವೇಳೆ ಆದರೆ ಆ ಗಿಡದಲ್ಲಿ ಇದ್ದ ಸಾಧ್ಯತೆಗಳೆಲ್ಲವೂ ವ್ಯಕ್ತವಾಗಿ ಪ್ರಕಟಗೊಂಡಿತು ಎಂದು ಹೇಳಬಹುದು. ಆದರೆ ಗುಲಾಬಿಯ ಆ ಗಿಡ ಹೂ ಬಿಡುವುದಕ್ಕೆ ಮುನ್ನವೇ ಒಣಗಿದರೆ ಅಥವಾ ಯಾರಾದರೂ ಅದನ್ನು ತುಳಿದು ಬಿಟ್ಟರೆ ಅಥವಾ ಅದನ್ನು ಕಿತ್ತೆಸೆದರೆ ಆ ಗಿಡವು ತನ್ನ ಉದ್ದೇಶದ ಈಡೇರಿಕೆಯಲ್ಲಿ ವಿಫಲವಾಯಿತು ಮತ್ತು ವ್ಯರ್ಥವಾಗಿ ನಾಶಹೊಂದಿತು ಎಂದು ನಾವು ಪ್ರತಿಕ್ರಿಯಿಸುವೆವು ತಾನೇ? ಮಾನವನದು ಕೂಡ ಇದೇ ಅವಸ್ಥೆ. ಯಾವ ಮಾನವನೂ ಹುಟ್ಟಿದೊಡನೆ

ಯಶಸ್ಸಿನ ಮಜಲನ್ನು ದಾಟುವುದಿಲ್ಲ; ಅವನನ್ನು ಸೃಷ್ಟಿಸಿದ ಉದ್ದೇಶವೂ ಈಡೇರುವುದಿಲ್ಲ. ಅದಕ್ಕಾಗಿ ಅವನಲ್ಲಿರಿಸಲಾಗಿರುವ ಪ್ರಗತಿ ಮತ್ತು ಪ್ರಬುದ್ಧತೆಯ ಸಾಧ್ಯತೆಯು ದಮನಿಸಲ್ಪಡದಂತೆ ನೋಡಿಕೊಳ್ಳಬೇಕಾಗಿದೆ. ಬದಲಾಗಿ ಒಂದು ಅತ್ಯುತ್ತಮ ಮತ್ತು ದೋಷರಹಿತ ವ್ಯಕ್ತಿತ್ವದ ರೂಪ ದಲ್ಲಿ ಅದು ವ್ಯಕ್ತಗೊಳ್ಳಬೇಕು. ಕುರ್‌ಆನ್ ಬಯಸುವ ಇಂತಹ ವ್ಯಕ್ತಿತ್ವದ ನಿರ್ಮಾಣ ಮತ್ತು ಪರಿಪೂರ್ಣತೆಯು ಸತ್ಸಂಕಲ್ಪ, ಸದ್ಭಾವನೆ, ಸಚ್ಚಾರಿತ್ರ್ಯ ಮತ್ತು ಸತ್ಕರ್ಮಗಳಿಂದ ಸಾಧ್ಯವಾಗುತ್ತದೆ. ಒಂದು ವೇಳೆ ಅವುಗಳ ಪೈಕಿ ಯಾವುದಾದರೊಂದು ಮಗ್ಗುಲಲ್ಲಿ ದೋಷ ಕಂಡು ಬಂದರೆ, ಅದರರ್ಥ ಮಾನವನಾಗಿರುತ್ತಾ ವ್ಯಕ್ತಿಯು ತನ್ನ ಜೀವನೋದ್ದೇಶವನ್ನು ಪೂರ್ತಿಗೊಳಿಸುವಲ್ಲಿ ಸೋತು ಹೋದನೆಂದಾಗುತ್ತದೆ.

ಜೀವನೋದ್ದೇಶದ ಗಳಿಕೆಯಲ್ಲಿ ಮಾನವನಿಂದ ಆಗುವಂತಹ ಪ್ರಮಾದಗಳಿಗೆ ಹಲವಾರು ಕಾರಣಗಳಿರುತ್ತವೆ. ಕೆಲವೊಮ್ಮೆ ಅವನು ಲಕ್ಷ್ಯವಿಲ್ಲದೆ, ತನ್ನ ಹೊಣೆಗಾರಿಕೆಗಳ ಪ್ರಜ್ಞೆಯಿಲ್ಲದೆ ಬಾಳುವುದು ಕಾರಣವಾಗುತ್ತದೆ. ಅದನ್ನು ಆತ ಪಥಭ್ರಷ್ಟತೆ ಮತ್ತು ಅಧರ್ಮದಲ್ಲಿ ಬಿದ್ದುಕೊಂಡಿದ್ದಾನೆ ಎಂದು ಹೇಳಲಾಗುವುದು.

ಕೆಲವೊಮ್ಮೆ ವ್ಯಕ್ತಿಯು ಭೌತಿಕವಾದ ಪ್ರಯೋಜನಗಳು ಮತ್ತು ದೈಹಿಕ ಸುಖಸಂತೋಷಗಳ ಹಿಂದೆ ಬಿದ್ದುಕೊಂಡಿರುತ್ತಾನೆ. ಹೀಗೆ ಅವನು ಅದರ ಸುತ್ತ ಮುತ್ತಲೇ ಬಾಳತೊಡಗುತ್ತಾನೆ. ದೇಹಸುಖದ ಹೊರತೂ ಬೇರೆ ಅನೇಕ ವಿಷಯಗಳಿವೆ, ಭೌತಿಕ ಅಗತ್ಯಗಳ ಹೊರತೂ ಅನೇಕ ಅಗತ್ಯಗಳಿರುತ್ತವೆ ಮತ್ತು ಅವು ಭೌತಿಕತೆಗಿಂತ ಎಷ್ಟೋ ಪಟ್ಟು ಹೆಚ್ಚು ಮೌಲ್ಯಯುತವಾಗಿರುತ್ತವೆ ಎಂಬುದರ ಅರಿವು ಅವನಿಗಿರುವುದಿಲ್ಲ. ಇಂತಹ ವ್ಯಕ್ತಿಯು ಲೌಕಿಕ ಲಾಭ ಮತ್ತು ಲೌಕಿಕ ಸಂತೋಷಗಳನ್ನೇ ಸರ್ವಸ್ವವೆಂದು ಭಾವಿಸತೊಡಗುತ್ತಾನೆ. ಅದರ ಹೊರತು ಅವನು ಬೇರೇನನ್ನು ಆಲೋಚಿಸಲಾರ. ಅಷ್ಟು ಮಾತ್ರವಲ್ಲ, ಅವನಿಗೆ ಬೇರಾವುದೇ ವಸ್ತುವಿನಲ್ಲಿ ಅವನಿಗೆ ಆಸಕ್ತಿಯೂ ಇರುವುದಿಲ್ಲ.

ಹಾಗಿದ್ದರೂ ಹಲವಾರು ಬಾರಿ ಪ್ರವಾದಿಗಳ ಮತ್ತು ಸಂದೇಶವಾಹಕರುಗಳ ಶಿಕ್ಷಣವು ಅವನ ಮುಂದೆ ಬರುತ್ತವೆ. ಆದರೆ ಅವನು ತನ್ನ ವೈಯಕ್ತಿಕ ಆಸಕ್ತಿಗಳು ಮತ್ತು ಪೂರ್ವಾಗ್ರಹ ಪೀಡಿತ ಚಿಂತನೆಗಳಿಗೆದುರು ಆ ಶಿಕ್ಷಣಕ್ಕೆ ಯಾವುದೇ ಮಹತ್ವ ಕಲ್ಪಿಸುವುದಿಲ್ಲ; ಅವನು ಬಹಳ ಉದ್ಧಟತನದಿಂದ ಆ ಶಿಕ್ಷಣವನ್ನು ಸುಳ್ಳಾಗಿಸಲು ಮುಂದಾಗುತ್ತಾನೆ. ನೈಜ ಬೋಧನೆ, ನ್ಯಾಯ-ಸಮಾನತೆ ಮತ್ತು ಸತ್ಯಪರತೆಯ ಬದಲು ಅವನು ಅನ್ಯಾಯಯುತವಾದ ವ್ಯವಹಾರವನ್ನು ಕೈಗೊಳ್ಳುತ್ತಾನೆ. ಇಂತಹ ವರ್ತನೆ ತೋರುವಾಗ ಅವನಿಗೆ ತನ್ನ ಚಾರಿತ್ರ್ಯದ

ಚಿಂತೆಯೂ ಇರುವುದಿಲ್ಲ; ತನ್ನನ್ನು ಸೃಷ್ಟಿಸಿದವನೊಬ್ಬನಿದ್ದಾನೆ ಮತ್ತು ಅವನ ಮುಂದೆ ತಾನು ಉತ್ತರದಾಯಿಯಾಗಿದ್ದೇನೆ ಎಂಬ ಪ್ರಜ್ಞೆಯೂ ಇರುವುದಿಲ್ಲ.

ಕೆಲವೊಮ್ಮೆ ವ್ಯಕ್ತಿಯು ಜನಾಂಗೀಯ ಅಥವಾ ಕುಲ ಪಕ್ಷಪಾತದಲ್ಲಿ ಬಿದ್ದು ಬಿಟ್ಟಿರುತ್ತಾನೆ ಮತ್ತು ಪಕ್ಷಪಾತದ ಬಂಧನದಿಂದ ಹೊರಬರಲಾರದೆ ಸತ್ಯದಿಂದ ವಂಚಿತನಾಗಿಬಿಡುತ್ತಾನೆ. ಕೆಲವೊಮ್ಮೆ ಅನಗತ್ಯವಾದ ಅಹಂಕಾರ ಮತ್ತು ಒಣಜಂಭವು ಅವನ ಹಾದಿಯಲ್ಲಿ ತೊಡಕಾಗಿ ಬಿಟ್ಟಿರುತ್ತದೆ ಮತ್ತು ಅವನು ತನ್ನ ತಪ್ಪು ವಿಧಾನ ವನ್ನೇ ಬಿಗಿಯಾಗಿ ಹಿಡಿದಿಟ್ಟಿರುತ್ತಾನೆ; ಹೀಗೆ ಅವನು ಯಾವ ಸ್ಥಿತಿಯಲ್ಲೂ ತನ್ನ ವ್ಯವಹಾರ ನೀತಿಯಲ್ಲಿ ಸುಧಾರಣೆಗೆ ಸಿದ್ಧನಾಗುವುದೇ ಇಲ್ಲ. ಈ ರೀತಿ ಯಾಗಿ ಮಾನವನು ಕಣ್ಣಿದ್ದೂ ಕುರುಡನಾಗಿದ್ದು ಬಿಡುತ್ತಾನೆ, ಕಿವಿಯಿದ್ದೂ ಕಿವುಡ ನಾಗಿರುತ್ತಾನೆ ಮತ್ತು ಹೃದಯವಿದ್ದೂ ಕಲ್ಲಿನಂತೆ ಸಂವೇದನಾರಹಿತನಾಗಿದ್ದು ಬಿಡುತ್ತಾನೆ. ಇಂತಹ ಕಾರಣಗಳಿಂದಾಗಿಯೇ ಸತ್ಯದಿಂದ ದೂರವಿರುವ ಜನರನ್ನು ಪವಿತ್ರ ಕುರ್‌ಆನ್ ಕೆಲವೆಡೆ ಅಕ್ರಮಿಗಳೆಂದು ಸಾರಿದೆ, ಕೆಲವು ಕಡೆ ಅಪರಾಧಿಗಳೆಂದೂ ಮತ್ತೆ ಕೆಲವೆಡೆ ವಿದ್ರೋಹಿಗಳೆಂದಿದೆ, ಮತ್ತೆ ಕೆಲವೆಡೆ ಕೃತಘ್ನರೆಂದೂ ಉಪಕಾರಗೇಡಿ ಗಳೆಂದೂ ಹೇಳಿದೆ, ಮಗುದೊಂದೆಡೆ ಪ್ರಾಣಿಗಳಂತೆ ಎಂದೂ ಮಾತ್ರವಲ್ಲ ಪ್ರಾಣಿ ಗಳಿಗಿಂತ ಕೀಳೆಂದೂ ಹೇಳಿದೆ, ಇನ್ನು ಕೆಲವೆಡೆ ಸಂವೇದನಾರಹಿತರೆಂದೂ ಮೃತ ರೆಂದೂ ಕತ್ತಲನ್ನು ಪೂಜಿಸುವವರೆಂದೂ ಹೇಳಿದೆ.

ಈ ಮೇಲೆ ತಿಳಿಸಲಾಗಿರುವ ಕೇಡುಗಳಲ್ಲಿ ಕೆಲವು ಮಾನಸಿಕವಾಗಿದ್ದರೆ; ಇನ್ನು ಕೆಲವು ಅಜ್ಞಾನ, ಭೌತಿಕತೆ ಮತ್ತು ಡಂಬಾಚಾರಗಳಿಗೆ ಸಂಬಂಧಿಸಿದವು ಗಳಾಗಿವೆ. ಡಂಬಾಚಾರ ಮತ್ತು ಭೌತಿಕತೆಯ ಪ್ರೇರಣೆಯ ಕಾರಣದಿಂದ ವ್ಯಕ್ತಿಯು ಕೇವಲ ತನ್ನ ಹೊಣೆಗಾರಿಕೆಯಿಂದ ನುಣುಚಿಕೊಳ್ಳುವುದು ಮಾತ್ರವಲ್ಲ, ತನ್ನ ಜೀವನದ ಮೂಲಭೂತ ಉದ್ದೇಶ ಅಂದರೆ ತನ್ನ ವ್ಯಕ್ತಿತ್ವದ ನಿರ್ಮಾಣವನ್ನೂ ಸಾರಾಸಗಟಾಗಿ ಕಡೆಗಣಿಸುವ ಮೂಲಕ ಆತ್ಮಹತ್ಯೆಯೆಂಬ ಪಾಪವನ್ನೆಸಗುತ್ತಾನೆ.

ಈ ಲೋಕದಲ್ಲಿ ಪ್ರಜ್ಞಾವಂತಿಕೆಯಿಂದ ಇರುವುದಕ್ಕೆ ಬದಲು ಮಾನವನು ಅಲಕ್ಷ್ಯತನದಿಂದಿರುವ ಸಾಧ್ಯತೆಯೇ ಹೆಚ್ಚು. ಏಕೆಂದರೆ ಈ ಲೋಕವು ಕ್ಷೋಭೆಗಳಿಂದ ತುಂಬಿಕೊಂಡಿದೆ ಮತ್ತು ಜೀವನದಲ್ಲಿ ಮಾನವನಿಗೆ ವಿವಿಧ ರೀತಿಯ ಸವಾಲುಗಳನ್ನು ಎದುರಿಸಬೇಕಾಗಿ ಬರುತ್ತದೆ. ಅವುಗಳನ್ನು ಎದುರಿಸುವಲ್ಲಿ ಸಾಮಾನ್ಯವಾಗಿ ಅವನು ಸೋತು ಹೋಗುತ್ತಾನೆ. ಇಂತಹ ಸ್ಥಿತಿಯಲ್ಲಿ ಮಾನವನ ಶಿಕ್ಷಣ ಮತ್ತು ತರಬೇತಿಯ ಕಡೆಗೆ ವಿಶೇಷ ಗಮನ ಹರಿಸಬೇಕಾದುದು ಅಗತ್ಯವಾಗಿತ್ತು. ಹಾಗಾಗಿ ಇಡೀ ರಮಝಾನ್ ತಿಂಗಳನ್ನು ಅದಕ್ಕಾಗಿ ಮೀಸಲಿಡಲಾಯಿತು

ಹಾಗೂ ಈ ತಿಂಗಳಲ್ಲಿ ಉಪವಾಸ ವ್ರತಾಚರಿಸುವುದು ಕಡ್ಡಾಯವೆಂದು ಸಾರಲಾಯಿತು. ಈ ಉಪವಾಸ ವ್ರತವು ಹಲವು ಮಗ್ಗಲುಗಳಲ್ಲಿ 'ಆತ್ಮಸಂಸ್ಕರಣೆ' ಅಥವಾ 'ವ್ಯಕ್ತಿತ್ವ ನಿರ್ಮಾಣ'ದಲ್ಲಿ ಅಸಾಧಾರಣವಾದ ಪಾತ್ರವನ್ನು ವಹಿಸುತ್ತದೆ.

ಸಹನೆ, ಸಂಯಮ ಮತ್ತು ಆತ್ಮನಿಗ್ರಹದ ಹೊರತು ನಾವು ವ್ಯಕ್ತಿತ್ವ ಮತ್ತು ಚಾರಿತ್ರ್ಯದ ಕಲ್ಪನೆಯನ್ನೇ ಇರಿಸಲಾರೆವೆಂಬುದು ನಿಮಗೆ ತಿಳಿದಿದೆಯೇ? ಆದ್ದರಿಂದಲೇ ಕುರ್‌ಆನ್ ಸಹನೆ, ಸಂಯಮಗಳಿಗೆ ಪ್ರಧಾನ ಮಹತ್ವ ನೀಡುತ್ತಾ ಹೇಳುತ್ತದೆ, "ಈ ಗುಣ ವಿಶೇಷವು ಸಹನಶೀಲರಿಗಲ್ಲದೆ ಇನ್ನಾರಿಗೂ ಲಭ್ಯವಾಗುವುದಿಲ್ಲ. ಈ ಸ್ಥಾನವು ಮಹಾ ಅದೃಷ್ಟಶಾಲಿಗಳ ಹೊರತು ಮತ್ತಾರಿಗೂ ಪ್ರಾಪ್ತವಾಗುವುದಿಲ್ಲ." (ಫುಸ್ಸಿಲತ್: 35)

ಸಹನೆಯ ಈ ಪ್ರಧಾನವಾದ ಮಹತ್ವವನ್ನು ದೃಷ್ಟಿಯಲ್ಲಿರಿಸುತ್ತಾ, ಪರಲೋಕದ ಯಶಸ್ಸು ಮತ್ತು ಸ್ವರ್ಗದಂತಹ ಅನುಗ್ರಹವನ್ನು ಸಹನಶೀಲರಿಗೆ ನೀಡಲಾಗುವುದು ಎಂದು ಹೇಳಲಾಗಿದೆ. ಪವಿತ್ರ ಕುರ್‌ಆನ್ ಹೇಳುತ್ತದೆ, "ಅಲ್ಲಾಹನು ಅವರನ್ನು ಆ ದಿನದ ಕೇಡಿನಿಂದ ರಕ್ಷಿಸುವನು ಮತ್ತು ಅವರಿಗೆ ಉಲ್ಲಾಸವನ್ನೂ ಹರ್ಷವನ್ನೂ ನೀಡುವನು ಮತ್ತು ಅವರ ಸಹನೆಯ ಪ್ರತಿಫಲವಾಗಿ ಅವರಿಗೆ ಸ್ವರ್ಗೋದ್ಯಾನವನ್ನೂ ರೇಶ್ಮೆಯ ಉಡುಪನ್ನೂ ದಯಪಾಲಿಸುವನು." (ಅದ್ದಹ್ರ್: 11 12)

ಸಹನೆ, ಸಂಯಮದಂತೆಯೇ ಚಾರಿತ್ರ್ಯ ನಿರ್ಮಾಣಕ್ಕಾಗಿ ವ್ಯಕ್ತಿಯು ಸತ್ಯವಂತನಾಗಿರಬೇಕಾದುದೂ ಅಗತ್ಯ. ಅದರಲ್ಲಿ ಯಾವುದೇ ಕಪಟತೆ ಇರಬಾರದು ಮತ್ತು ಅವನ ಮೇಲೆ ಸಂಪೂರ್ಣವಾಗಿ ಭರವಸೆಯನ್ನಿರಿಸಲ್ಪಡಬೇಕು. ಸತ್ಯವಂತಿಕೆಯ ಹೊರತು ವ್ಯಕ್ತಿಯು ಧ್ವನಿಯ ದೌರ್ಬಲ್ಯ ಮತ್ತು ಟೊಳ್ಳುತನದಿಂದ ಮುಕ್ತಿಯನ್ನು ಗಳಿಸಲಾರ. ಆದ್ದರಿಂದಲೇ ಜೀವನದಲ್ಲಿ ಸಹನೆಯಂತೆಯೇ ಸತ್ಯವಂತಿಕೆಗೂ ಪ್ರಾಧಾನ್ಯತೆ ಇದೆ ಎಂದು ಪವಿತ್ರ ಕುರ್‌ಆನ್ ಕಲಿಸುತ್ತದೆ.

"ಅಲ್ಲಾಹ್ ಸತ್ಯಸಂಧರಿಗೆ ಅವರ ಸತ್ಯಸಂಧತೆಯ ಸತ್ಫಲ ನೀಡುವಂತಾಗಲಿಕ್ಕೂ..." (ಅಲ್ ಅಹ್‌ಝಾಬ್: 24)

ಇನ್ನೊಂದೆಡೆ ಹೇಳಲಾಯಿತು, "ಆಗ ಅಲ್ಲಾಹನು ಹೇಳುವನು– ಸತ್ಯಸಂಧರಿಗೆ ಅವರ ಸತ್ಯಸಂಧತೆಯು ಫಲ ನೀಡುವ ದಿನವಿದು. ಅವರಿಗಾಗಿ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಿವೆ. ಇಲ್ಲಿ ಅವರು ಸದಾ ಕಾಲವೂ ವಾಸಿಸುತ್ತಿರುವವರು. ಅಲ್ಲಾಹನು ಅವರಿಂದ ಸಂತುಷ್ಟನಾದನು ಮತ್ತು ಅವರು ಅವನಿಂದ ಸಂತುಷ್ಟರಾದರು. ಇದೇ ಅತ್ಯುತ್ಕೃಷ್ಟ ಯಶಸ್ಸು." (ಅಲ್ ಮಾಇದ: 119)

ಇನ್ನು ಉಪವಾಸ ವ್ರತವು ವ್ಯಕ್ತಿಯಲ್ಲಿ ಈ ಎಲ್ಲ ಗುಣಗಳನ್ನು ಹೇಗೆ ಉಂಟು ಮಾಡುತ್ತದೆ ಮತ್ತು ಅವುಗಳಿಗೆ ಶಕ್ತಿಯನ್ನು ನೀಡುತ್ತದೆ ಎಂಬುದನ್ನು ಪರ್ಯಾಲೋಚಿಸಿ ನೋಡಿ. ವಾಸ್ತವದಲ್ಲಿ ಆ ಗುಣಗಳು ಚಾರಿತ್ರ್ಯ ಮತ್ತು ನಡತೆಯ ಅನಿವಾರ್ಯ ಭಾಗಗಳಾಗಿವೆ. ಅವುಗಳ ಹೊರತು ಚಿತ್ತದ ಉನ್ನತಿ ಮತ್ತು ಅದರ ಬೆಳವಣಿಗೆಯನ್ನು ಕಲ್ಪಿಸಲೂ ಸಾಧ್ಯವಿಲ್ಲ.

ವಿಶ್ವಾಸಿಯು ರಮಝಾನ್ ತಿಂಗಳಲ್ಲಿ ಉಪವಾಸ ವ್ರತಾಚರಿಸುವ ಮೂಲಕ ಅಲ್ಲಾಹನ ಮೇಲಿರುವ ತನ್ನ ವಿಶ್ವಾಸವನ್ನು ವ್ಯಕ್ತಪಡಿಸುತ್ತಾನೆ ಮತ್ತು ಆ ವಿಶ್ವಾಸಕ್ಕೆ ಶಕ್ತಿಯನ್ನೂ ತುಂಬುತ್ತಾನೆ. ತಾನು ಅಲ್ಲಾಹನ ಯಾವುದೇ ಆದೇಶವನ್ನೂ ಉಲ್ಲಂಘಿಸಲಾರೆನೆಂದು ಕಾರ್ಯತಃ ಘೋಷಿಸುತ್ತಾನೆ. ಏಕೆಂದರೆ ಅಲ್ಲಾಹನ ಉಲ್ಲಂಘನೆಯು ನಾಳೆ ಪುನರುತ್ಥಾನ ದಿನದಂದು ತನಗೆ ನಷ್ಟಕಾರಿಯಾಗಿರುವುದು ಮತ್ತು ದೇವಕ್ರೋಧವೇ ತನ್ನ ಪಾಲಿಗಿರುವುದು ಎಂಬ ಪ್ರಜ್ಞೆ ಅವನಲ್ಲಿರುತ್ತದೆ. ರಮಝಾನ್ ತಿಂಗಳಲ್ಲಿ ಉಪವಾಸ ವ್ರತಾಚರಿಸಿ ಹಸಿವು-ದಾಹವನ್ನು ಸಹಿಸುವ ಮೂಲಕ ತನ್ನಲ್ಲಿ ಸಹನೆಯೆಂಬ ಗುಣವನ್ನು ಉದ್ದೀಪಿಸುತ್ತಾನೆ. ಅಲ್ಲಾಹನ ಸಂದೇಶವಾಹಕರು(ಸ) ಕೂಡ ರಮಝಾನನ್ನು ಸಹನೆಯ ತಿಂಗಳು ಎಂದು ಬಣ್ಣಿಸಿರುವರು. ಈ ತಿಂಗಳ ರಾತ್ರಿಗಳಲ್ಲಿ ಕಿಯಾಮ್(ನಮಾಝ್)ನ ವಿಶೇಷ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಇದರಿಂದ ಒಂದೆಡೆ ಅಲ್ಲಾಹನೊಂದಿಗೆ ಸಂಬಂಧ ಬಲಗೊಳ್ಳುತ್ತದೆ, ಇನ್ನೊಂದೆಡೆ ಅದರಿಂದ ಮಾನವನಲ್ಲಿ ಪರಿಶ್ರಮದ ಕಷ್ಟಗಳನ್ನು ಸಹಿಸುವ ಶಕ್ತಿ ಬೆಳೆಯುತ್ತದೆ. ಸಹನೆ ಮತ್ತು ಸತ್ಯವಂತಿಕೆಯ ನಡುವೆ ಗಾಢವಾದ ಸಂಬಂಧವಿದೆ. ಸಹನೆಯ ಹೊರತು ಸತ್ಯದಲ್ಲಿ ಸ್ಥಿರವಾಗಿರಲು ಸಾಧ್ಯವಿಲ್ಲ. ಉಪವಾಸವು ಕರ್ಮಕ್ಕೆ ಸಂಬಂಧಿಸಿರುವ ಕಾರಣ, ಅದರಿಂದ ವ್ಯಕ್ತಿಯಲ್ಲಿ ಬೆಳೆಯುವ ಗುಣವು ಭರವಸೆಗೆ ಯೋಗ್ಯವಾಗಿರುವುದು. ಉಪವಾಸಿಗನು ಜನರ ಕಣ್ಣು ತಪ್ಪಿಸಿ ತಿನ್ನಲಾರ. ತನ್ನ ಉಪವಾಸವು ಅಲ್ಲಾಹನಿಗಾಗಿದೆ ಮತ್ತು ಅಲ್ಲಾಹನಿಂದ ತನ್ನ ಕಳ್ಳತನವನ್ನು ಎಂದೂ ಮರೆಮಾಚಲಾರೆನೆಂಬುದನ್ನು ಅವನು ಚೆನ್ನಾಗಿ ಬಲ್ಲನು. ಈ ಪ್ರಕಾರ ಉಪವಾಸ ವ್ರತವು ಮಾನವನನ್ನು ಎಲ್ಲ ರೀತಿಯ ಮೋಸ ಮತ್ತು ವಂಚನೆಯಿಂದ ರಕ್ಷಿಸಿ ಅವನನ್ನು ಓರ್ವ ಸತ್ಯವಂತ ದಾಸನನ್ನಾಗಿ ಮಾಡುತ್ತದೆ.

ಇನ್ನು ಈ ಉಪವಾಸ ವ್ರತವು ವ್ಯಕ್ತಿಯ ಸುಪ್ತ ಪ್ರಜ್ಞೆಯನ್ನು ಬಡಿದೆಬ್ಬಿಸುತ್ತದೆ ಮತ್ತು ಅವನ ಭಾವನೆಗಳಿಗೆ ಸೊಬಗನ್ನು ನೀಡುತ್ತದೆ. ಅದರ ಕಾರಣದಿಂದ ಅವನಲ್ಲಿ ಸ್ವಾಭಾವಿಕವಾಗಿಯೇ ತನ್ನ ಜೊತೆಯಲ್ಲಿ ಉಪವಾಸ ವ್ರತಾಚರಿಸುವ

ಮತ್ತು ದೇವಾರಾಧನೆಯಲ್ಲಿ ತತ್ಪರರಾಗಿರುವ ತನ್ನ ಸಹೋದರರೊಂದಿಗೆ ಉತ್ತಮ ಸಂಬಂಧ ಬೆಳೆಯುತ್ತದೆ. ಆ ಪೈಕಿ ಬಡವರೂ ಅಪೇಕ್ಷಿತರೂ ಇರುತ್ತಾರೆ. ಅವರಿಗಾಗಿ ಹೃದಯ ದಲ್ಲಿ ಸಹಾನುಭೂತಿಯ ಭಾವನೆ ಬೆಳೆಯುವುದು ಒಂದು ಸ್ವಾಭಾವಿಕ ಪ್ರಕ್ರಿಯೆಯಾಗಿದೆ. ಅಂತಹ ಜನರಿಗೆ ಸಹಾಯ ಮಾಡುವುದರಿಂದ ವ್ಯಕ್ತಿಗೆ ಸಂತೋಷ ಲಭಿಸುತ್ತದೆ.

ಪವಿತ್ರ ಕುರ್‌ಆನಿನ ಪ್ರಕಾರ ಉಪವಾಸ ವ್ರತಾಚರಣೆಯಿಂದ ಮಾನವನಲ್ಲಿ ತಕ್ವಾದ (ಧರ್ಮನಿಷ್ಠೆಯ) ಗುಣ ಬೆಳೆಯುತ್ತದೆ. ಅವನಲ್ಲಿರಬಹುದಾದ ಅಲಕ್ಷ್ಯ-ಆಲಸ್ಯ ದೂರವಾಗುತ್ತದೆ. ಅವನಿಗೆ ಪ್ರಜ್ಞಾವಂತಿಕೆ ಮತ್ತು ಹೊಣೆಗಾರಿಕೆಯ ಪ್ರಜ್ಞೆಯೊಂದಿಗೆ ಬದುಕುವ ಪಾಠ ಲಭಿಸುತ್ತದೆ. ಪವಿತ್ರ ಕುರ್‌ಆನಿನಲ್ಲಿ ಸ್ಪಷ್ಟವಾಗಿ ಹೀಗೆನ್ನಲಾಗಿದೆ, "ಓ ಸತ್ಯವಿಶ್ವಾಸಿಗಳೇ, ಗತ ಪ್ರವಾದಿಗಳ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದ್ದಂತೆಯೇ ನಿಮ್ಮ ಮೇಲೂ ಉಪವಾಸ ವ್ರತವನ್ನು ಕಡ್ಡಾಯ ಗೊಳಿಸಲಾಗಿದೆ. ಇದರಿಂದ ನಿಮ್ಮಲ್ಲಿ ಧರ್ಮನಿಷ್ಠೆಯ ಗುಣವಿಶೇಷವುಂಟಾಗುವುದೆಂದು ಆಶಿಸಲಾಗಿದೆ." (ಅಲ್ ಬಕರ: 183)

ಅಂದರೆ ನಿಮ್ಮಲ್ಲಿರಬಹುದಾದ ಅಲಕ್ಷ್ಯ-ಆಲಸ್ಯವು ದೂರವಾಗಬೇಕು, ಪ್ರಜ್ಞಾವಂತಿಕೆಯ ಸ್ವಭಾವವು ಬೆಳೆದು ಬರಬೇಕು, ಸರಿ-ತಪ್ಪುಗಳನ್ನು ಅರಿಯುವಲ್ಲಿ ವಿಳಂಬವಾಗದಷ್ಟು ನಿಮ್ಮ ಆಸಕ್ತಿ ಸ್ವಚ್ಛ ಮತ್ತು ಸ್ಪಷ್ಟಗೊಳ್ಳಬೇಕು, ಯಾವ ಕಾರ್ಯ ವಿಧಾನವನ್ನು ಅನುಸರಿಸುವುದರಿಂದ ನೈಜ ಪ್ರಯೋಜನವಿದೆ ಮತ್ತು ಯಾವ ಕಾರ್ಯವಿಧಾನದಿಂದ ನೈತಿಕ ಅಧಃಪತನವಾಗುವುದು ಎಂಬ ಅರಿವು ನಿಮ್ಮಲ್ಲಿ ಬೆಳೆದು ಬರಬೇಕೆಂಬ ಉದ್ದೇಶದಿಂದಲೇ ನಿಮ್ಮ ಮೇಲೆ ಉಪವಾಸ ವ್ರತವನ್ನು ಕಡ್ಡಾಯಗೊಳಿಸಲಾಗಿದೆ. ಅಲ್ಲಾಹನ ಸಂದೇಶವಾಹಕರು(ಸ) ಹೇಳಿರುವರು, "ಯಾರಾದರೂ ವಿಶ್ವಾಸ ಮತ್ತು ಆತ್ಮಾವಲೋಕನದೊಂದಿಗೆ ಉಪವಾಸ ವ್ರತಾಚರಿಸಿದರೆ, ಅವನ ಗತ ಪಾಪಗಳೆಲ್ಲವೂ ಕ್ಷಮಿಸಲ್ಪಡುವುದು." (ಬುಖಾರಿ, ಮುಸ್ಲಿಮ್)

ಉಪವಾಸ ವ್ರತದಲ್ಲಿ ಅಲ್ಲಾಹ್ ಮತ್ತು ಅಲ್ಲಾಹನೊಡನೆ ಭೇಟಿಯ ವಿಶ್ವಾಸವು ನವೀಕರಿಸಲ್ಪಡುವುದು ಹಾಗೂ ನಿಜಾರ್ಥದಲ್ಲಿ ಅಲ್ಲಾಹನ ಸಂಪ್ರೀತಿಯು ಉದ್ದೇಶವಾಗಿದ್ದರೆ ಅದುವೇ ವಿಶ್ವಾಸ ಮತ್ತು ಆತ್ಮಾವಲೋಕನವಾಗಿದೆ. ಈ ವಿಶ್ವಾಸ ಮತ್ತು ಆತ್ಮಾವಲೋಕನವು ವಾಸ್ತವದಲ್ಲಿ ಉಪವಾಸ ವ್ರತದ್ದೇ ಒಂದು ಭಾಗವಾಗಿದೆ. ಅದರ ಕಾರಣದಿಂದಲೇ ಉಪವಾಸ ವ್ರತವು ಪ್ರಜ್ಞಾಪೂರ್ವಕ ಮತ್ತು ನೈಜವಾಗಿ ಮಾರ್ಪಡುತ್ತದೆ; ಅದು ಕೇವಲ ಸಂಪ್ರದಾಯವಾಗಿದ್ದು

ಬಿಡುವುದಿಲ್ಲ. ಇಂತಹ ಉಪವಾಸ ವ್ರತದಲ್ಲಿ ವ್ಯಕ್ತಿಯು ಪಾಪಗಳಿಂದ ಮುಕ್ತನಾಗುವ ಮತ್ತು ಕೆಡುಕುಗಳ ಪ್ರಭಾವದಿಂದ ಸಂಪೂರ್ಣ ಸುರಕ್ಷಿತನಾಗುವ ಗುಣವನ್ನು ಬೆಳೆಸಿಕೊಳ್ಳುತ್ತಾನೆ. ಅಲ್ಲದೆ ಉಪವಾಸ ವ್ರತವು ಕೇವಲ ಪಾಪಗಳನ್ನು ಅಳಿಸುವುದಷ್ಟೇ ಅಲ್ಲ, ವ್ಯಕ್ತಿಯನ್ನು ಎಲ್ಲ ರೀತಿಯ ಪಾಪ, ಅಕ್ರಮ ಮತ್ತು ದೇವಾಜ್ಞೋಲ್ಲಂಘನೆಯ ಕಾರ್ಯಗಳಿಂದ ತಡೆದಿರಿಸಲ್ಪಡುತ್ತಾನೆ.

ಆದ್ದರಿಂದಲೇ ಅಲ್ಲಾಹನ ಸಂದೇಶವಾಹಕರು(ಸ) ಹೀಗೆಂದಿರುವರು, "ಯಾರು ಸುಳ್ಳು ಮಾತನ್ನಾಡುವುದನ್ನು ಮತ್ತು ಅದರಂತೆ ವರ್ತಿಸುವುದನ್ನು ತೊರೆಯುವು ದಿಲ್ಲವೋ ಅವನು (ಉಪವಾಸ ವ್ರತಾಚರಿಸಿ) ಆಹಾರ ಪಾನೀಯವನ್ನು ತೊರೆಯುವ ಅಗತ್ಯ ಅಲ್ಲಾಹನಿಗಿಲ್ಲ." (ಬುಖಾರಿ)

ಸ್ವತಃ ಪವಿತ್ರ ಕುರ್‌ಆನಿನಲ್ಲಿ ಉಪವಾಸದ ಶಿಷ್ಟಾಚಾರಗಳನ್ನು ಉಲ್ಲೇಖಿಸುತ್ತಾ ಹೀಗೆನ್ನಲಾಗಿದೆ, "ನೀವು ನಿಮ್ಮ ಸಂಪತ್ತನ್ನು ಪರಸ್ಪರ ಅನುಚಿತ ರೀತಿಯಿಂದ ಕಬಳಿಸಬಾರದು ಮತ್ತು ನಿಮಗೆ ಇತರರ ಸಂಪತ್ತಿನ ಒಂದಂಶವನ್ನು ಉದ್ದೇಶ ಪೂರ್ವಕವಾಗಿ ಅಕ್ರಮ ರೂಪದಿಂದ ಕಬಳಿಸುವ ಸಂದರ್ಭ ಸಿಗುವಂತೆ ಅವು ಗಳನ್ನು ಅಧಿಕಾರಿಗಳ ಮುಂದೆ ಸಮರ್ಪಿಸಬಾರದು." (ಅಲ್ ಬಕರ: 188)

ಈ ಮೇಲೆ ತಿಳಿಸಲಾದಂತೆ ಉಪವಾಸ ವ್ರತದಿಂದ ಮಾನವನ ತರಬೇತಿ ಯಾಗುತ್ತದೆ. ಆ ಮೂಲಕ ಅವನು ಚಿತ್ತಾಕಾಂಕ್ಷೆಗಳು ಮತ್ತು ದೇಹೇಚ್ಛೆಯ ಗುಲಾಮನಾಗಿ ಉಳಿಯುವುದಿಲ್ಲ. ಮಾನವನ ಭೌತಿಕ ಅಗತ್ಯಗಳೂ ಇರುತ್ತವೆ. ಅದನ್ನು ಯಾವತ್ತಿಗೂ ನಿರಾಕರಿಸಲಾಗದು. ಆದರೆ ಆ ಅಗತ್ಯಗಳ ಹಿಂದೆಯೇ ಬಿದ್ದುಕೊಂಡು ಅವುಗಳನ್ನೇ ಜೀವನದ ಪರಮ ಗುರಿಯೆಂದು ಭಾವಿಸು ವಂತಾಗಬಾರದು; ಹಲಾಲ್-ಹರಾಮ್, ಸಹ್ಯ-ಅಪ್ರಿಯ ವಿಷಯಗಳ ವ್ಯತ್ಯಾಸವೇ ಉಳಿಯದಂತಾಗಬಾರದು; ಅಂತೆಯೇ ನ್ಯಾಯ-ಸಮಾನತೆ, ಸಹೋದರತೆ, ಸಹಾನುಭೂತಿ, ಹಿತಚಿಂತನೆ, ಪ್ರೀತಿ ಇತ್ಯಾದಿಗಳನ್ನು ಬದಿಗಿರಿಸಿ ಒಂದು ಸ್ವಾರ್ಥ ಪ್ರಾಣಿಯಂತಾಗಿ ಬಿಡುವಷ್ಟು ಭೌತಿಕ ಮೋಹವೂ ಬೆಳೆಯಬಾರದು.

ಮಾನವನು ಅಲ್ಲಾಹನ ಆದೇಶದಂತೆ ಉಪವಾಸ ವ್ರತಾಚರಿಸುತ್ತಾನೆ, ಹಗಲಲ್ಲಿ ಆಹಾರ-ಪಾನೀಯ ತೊರೆಯುತ್ತಾನೆ ಮತ್ತು ಲೈಂಗಿಕೇಚ್ಛೆಯ ಈಡೇರಿಕೆ ಯಿಂದಲೂ ದೂರವುಳಿಯುತ್ತಾನೆ. ಹೀಗೆ ವಾಸ್ತವದಲ್ಲಿ ಅಲ್ಲಾಹನ ಎಲ್ಲ ಆದೇಶ ಗಳನ್ನು ಪಾಲಿಸಲು, ಜೀವನದ ಎಲ್ಲ ರಂಗಗಳಲ್ಲಿ ಅಲ್ಲಾಹನ ಆಜ್ಞಾಪಾಲಕ ಮತ್ತು ಪ್ರಾಮಾಣಿಕ ದಾಸನಾಗಿ ಇರಲು ತನ್ನನ್ನು ತರಬೇತುಗೊಳಿಸುತ್ತಾನೆ. ಇದರಿಂದಾಗಿ ಅಲ್ಲಾಹನಿಗೆ ವಿದ್ರೋಹವೆಸಗುವ ಮತ್ತು ಅವನ ಆಜ್ಞೆಗಳನ್ನು ಉಲ್ಲಂಘಿಸುವ

ಒಲವುಗಳಿಗೆ ಬೆಳೆಯಲು ಅವಕಾಶವೊದಗುವುದಿಲ್ಲ. ಇಂತಹ ವ್ಯಕ್ತಿಯು ಅಲ್ಲಾಹನ ದೃಷ್ಟಿಯಲ್ಲಿ ಅಪರಾಧಿಯೆಂದು ಪರಿಗಣಿಸಲ್ಪಡುವುದನ್ನು ಇಷ್ಟಪಡುವುದಿಲ್ಲ ಅಥವಾ ಅವನ ದರಬಾರಿನಲ್ಲಿ ಅಕ್ರಮಿ ಮತ್ತು ವಿದ್ರೋಹಿಯೆಂದು ಸಾರಲ್ಪಡುವುದನ್ನು ಇಷ್ಟಪಡುವುದಿಲ್ಲ ಅಥವಾ ತೀರ್ಮಾನದ ದಿನ ಸುಳ್ಳುಗಾರ ಮತ್ತು ಕಪಟವಿಶ್ವಾಸಿ ಎಂದು ಸಾಬೀತುಗೊಳ್ಳಲು ಇಷ್ಟಪಡುವುದಿಲ್ಲ ಹಾಗೆಯೇ ತನ್ನ ಮೌಲ್ಯದ ಪ್ರಜ್ಞೆಯಿಲ್ಲದ, ತನ್ನ ಕೆಟ್ಟ ಪರಿಣಾಮದ ಅರಿವು ಇಲ್ಲದ ಅಜ್ಞಾನದ ಅಂಧಕಾರದಲ್ಲಿ ಕರಗಿಹೋದವರಲ್ಲಿ ಸೇರಿಸಲ್ಪಡುವುದನ್ನು ಇಷ್ಟಪಡುವುದಿಲ್ಲ.

ಒಂದು ತಿಂಗಳ ನಿರಂತರ ಉಪವಾಸ ವ್ರತದಿಂದ, ಐಹಿಕವಾದ ಭೌತಿಕ ಅನುಗ್ರಹಗಳಿಗೂ ಮೀರಿದ ಒಂದು ಅನುಗ್ರಹವಿದೆ ಮತ್ತು ಅದನ್ನು ಎಂದಿಗೂ ಕಡೆಗಣಿಸಲಾಗದು ಎಂಬ ವಾಸ್ತವವು ಬೆಳಕಿಗೆ ಬರುತ್ತದೆ. ಯಾವ ಪ್ರಭುವಿನ ನಾಮವೆತ್ತಿ ನಾವು ಉಪವಾಸ ವ್ರತಾಚರಿಸುತ್ತೇವೋ ಮತ್ತು ಉಪವಾಸ ಪಾರಣೆ ಮಾಡುತ್ತೇವೋ ಆ ಪ್ರಭುವಿನ ನಾಮ ಸ್ಮರಣೆ ಹಾಗೂ ಅವನ ಸಂತುಷ್ಟಿಯನ್ನು ಇಚ್ಛಿಸುವುದೇ ಆ ಅನುಗ್ರಹವಾಗಿದೆ. ಇದು ಉಪವಾಸ ವ್ರತಕ್ಕೆ ಒಂದು ಉತ್ತಮ ಆರಾಧನೆಯ ಸ್ಥಾನವನ್ನು ಗಳಿಸಿ ಕೊಡುತ್ತದೆ. ಆ ಆರಾಧನೆಯ ಮೂಲಕ ನಮ್ಮ ಆತ್ಮದ ಸಂಸ್ಕರಣೆಯಾಗುತ್ತದೆ.

ಜಗತ್ತಿನ ಸಕಲ ಅನುಗ್ರಹಗಳ ಪೈಕಿ ಅತ್ಯುತ್ತಮ ಅನುಗ್ರಹವು ಜೀವನ ಮತ್ತು ಜೀವನ ಪ್ರಜ್ಞೆಯಾಗಿದೆ. ಆದರೆ ಅದನ್ನು ಪೂರ್ತೀಕರಿಸುವ ಕರ್ತವ್ಯದಲ್ಲಿ ನಾವು ಅಲಕ್ಷ್ಯ ತೋರಿದರೆ ಆ ಜೀವನವೇ ಮಿಥ್ಯೆಯಾಗಿ ಮಾರ್ಪಡುತ್ತದೆ. ಜೀವನದ ಮೂಲ ಗಳಿಕೆಯು ಉನ್ನತವಾದ ಚಾರಿತ್ರ್ಯವಾಗಿದೆ. ಇದೇ ಉನ್ನತವಾದ ಚಾರಿತ್ರ್ಯವನ್ನು ಗಳಿಸುವುದೇ ಆತ್ಮಸಂಸ್ಕರಣೆಯಾಗಿದೆ. ಒಂದು ವೇಳೆ ನಮ್ಮ ಉಪವಾಸ ವ್ರತದಿಂದ ನಮ್ಮ ಆತ್ಮಸಂಸ್ಕರಣೆ ಆಗದಿದ್ದರೆ, ಉಪವಾಸ ವ್ರತಾಚರಿಸಿದರೂ ನಾವು ಉನ್ನತ ಚಾರಿತ್ರ್ಯವನ್ನು ಗಳಿಸದೇ ಹೋದರೆ, ನಮ್ಮ ಉಪವಾಸ ವ್ರತವು ನೈಜ ಆತ್ಮದಿಂದ ಮುಕ್ತವಾಗಿರುವ ಒಂದು ಸಂಪ್ರದಾಯ ಮಾತ್ರವಾಗಿ ಉಳಿದಿದೆ ಎಂದಷ್ಟೇ ಹೇಳಬಹುದಾಗಿದೆ. ಹಾಗಾಗಿ ನಮ್ಮ ಉಪವಾಸ ವ್ರತವು ಕೇವಲ ಸಾಂಪ್ರದಾಯಿಕ ಮಾತ್ರವಾಗಿ ಉಳಿಯದಂತೆ, ಅದೊಂದು ನೈಜವಾದ ಆರಾಧನೆಯಾಗುವಂತೆ ಪ್ರಾರ್ಥಿಸಬೇಕಾಗಿದೆ. ಈ ರೀತಿಯಾಗಿ ಅಲ್ಲಾಹನು ಯಾವ ಉದ್ದೇಶದಿಂದ ನಮ್ಮ ಮೇಲೆ ಉಪವಾಸ ವ್ರತವನ್ನು ಕಡ್ಡಾಯಗೊಳಿಸಿರುವನೋ ಆ ಉದ್ದೇಶ ಪೂರ್ತಿಯಾಗಲೆಂದು ಪ್ರಾರ್ಥಿಸಬೇಕು.



# ರಮಝಾನ್ ತಿಂಗಳ ಆಧ್ಯಾತ್ಮಿಕತೆ

ಮಾನವನ ಜೀವನವು ತನ್ನಲ್ಲಿ ಅಪಾರವಾದ ಸಾಧ್ಯತೆಯನ್ನು ಹೊಂದಿರುತ್ತದೆ. ಅವುಗಳಿಂದ ಪ್ರಯೋಜನ ಪಡೆಯಬೇಕಾದುದು ಮತ್ತು ಅವುಗಳನ್ನು ಸಂಭವಿಸಲು ಬಿಡಬೇಕಾದುದು ಶರ್ತವಾಗಿದೆ. ಅದರ ಉಪಮೆ ಹೀಗಿದೆ: ಒಂದು ಬೀಜದಲ್ಲಿ ಹೆಮ್ಮರವಾಗುವ ಸಾಧ್ಯತೆ ಇರುತ್ತದೆ. ಆದರೆ ಒಂದು ವೇಳೆ ಆ ಬೀಜವನ್ನು ಯಾರಾದರೂ ಬಿಸಿ ಬಾಣಲೆಯಲ್ಲಿ ಹುರಿದರೆ, ಅದರಲ್ಲಿರುವ ಸಾಧ್ಯತೆಯೇನಿದೆಯೋ ಅದೆಲ್ಲವೂ ಕೊನೆಗೊಳ್ಳುತ್ತದೆ. ಇನ್ನು ಅದರಿಂದ ಮರವಾಗುವ ನಿರೀಕ್ಷೆಯಿರಲಾಗದು; ಅದರಿಂದ ಹೂ-ಹಣ್ಣು ಮತ್ತು ದಟ್ಟ ನೆರಳನ್ನು ಬಯಸಲು ಸಾಧ್ಯವಿಲ್ಲ. ಮಾನವನ ಜೀವನದ ಅವಸ್ಥೆಯೂ ಇದೇ ಆಗಿದೆ.

ಮಾನವನ ಸ್ವಾಭಾವಿಕ ಪ್ರತಿಭೆಗಳು ಮತ್ತು ಸಾಮರ್ಥ್ಯಗಳು ಬೆಳೆದು ಬರ ಬೇಕಾದರೆ, ಅದಕ್ಕೆ ಶಿಕ್ಷಣ-ತರಬೇತಿಯ ವ್ಯವಸ್ಥೆಯನ್ನು ಮಾಡುವುದು ಒಂದು ಮಾನವೀಯ ಅಗತ್ಯವಾಗಿದೆ. ಸಾಮಾನ್ಯ ಜೀವಿಗಳಿಂತ ಭಿನ್ನವಾಗಿ ಮಾನವನಿಗೆ ತನ್ನದೇ ಆದ ನೈತಿಕ ಅಸ್ತಿತ್ವವಿರುತ್ತದೆ. ಈ ನೈತಿಕ ಅಸ್ತಿತ್ವದ ಕೆಲವು ಅನಿವಾರ್ಯ ಬೇಡಿಕೆಗಳೂ ಇವೆ. ಆ ಬೇಡಿಕೆಗಳನ್ನು ಪೂರ್ತೀಕರಿಸದೆ ಮಾನವನ ಜೀವನದ ಪರಿಪೂರ್ಣತೆ ಮತ್ತು ಅದರ ಯಶಸ್ಸನ್ನು ಕಲ್ಪಿಸಲು ಸಾಧ್ಯವಿಲ್ಲ. ಈ ಲೋಕದಲ್ಲಿ ಜನರ ಮನಸ್ಸುಗಳ ಮೇಲೆ ಭೌತಿಕತೆ ಮತ್ತು ಲೌಕಿಕತೆಯ ಪ್ರಭಾವ ಎಷ್ಟಿದೆ ಎಂದರೆ, ವ್ಯಕ್ತಿಗೆ ತನ್ನ ಜೀವನವನ್ನು ಅದರ ಸ್ವಾಭಾವಿಕ ಪರಿಶುದ್ಧತೆಯಲ್ಲಿ ನೋಡಲು ಮತ್ತು ಜೀವನದ ಪ್ರಮುಖ ಮೌಲ್ಯ ಹಾಗೂ ಅಮೂಲ್ಯ ವಾಸ್ತವಿಕತೆ ಗಳನ್ನು ಅರ್ಥ ಮಾಡಲು ತೀರಾ ದುಸ್ತರವೆನಿಸುತ್ತದೆ. ಇಂತಹ ಸ್ಥಿತಿಯಲ್ಲಿ ಮಾನವನ ತರಬೇತಿ ಮತ್ತು ಸಂಸ್ಕರಣೆಯ ಅಗತ್ಯವು ಇನ್ನಷ್ಟು ಹೆಚ್ಚುತ್ತದೆ.

ರಮಝಾನ್ ತಿಂಗಳಿಡೀ ನಮ್ಮ ವೈಚಾರಿಕ, ಆಧ್ಯಾತ್ಮಿಕ ಮತ್ತು ಪ್ರಾಯೋಗಿಕ ತರಬೇತಿಗಾಗಿ ಮೀಸಲಿಡಲಾಗಿದೆ ಎಂಬುದರಿಂದ ಈ ತಿಂಗಳ ಮಹತ್ವ ಮತ್ತು ಅದರ ಆಂತರ್ಯವನ್ನು ಅಂದಾಜಿಸಬಹುದಾಗಿದೆ. ತರುವಾಯ ತರಬೇತಿಗಾಗಿ,

ನಮ್ಮ ಆತ್ಮದ ಬೆಳವಣಿಗೆ ಮತ್ತು ನಮ್ಮ ಚಾರಿತ್ರ್ಯದ ನಿರ್ಮಾಣದಲ್ಲಿ ಸಹಾಯಕವಾಗುವಂತಹ ಎಲ್ಲ ವಿಷಯಗಳನ್ನೂ ಪರಿಗಣಿಸಲಾಗಿದೆ. ರಮಝಾನಿನಲ್ಲಿ ನಮ್ಮ ಯಾವ ತರಬೇತಿಯ ವ್ಯವಸ್ಥೆಯನ್ನು ಮಾಡಲಾಗಿದೆಯೋ, ಅದು ಯಾವುದೋ ಅಪೂರ್ಣ ಮತ್ತು ದೋಷಪೂರ್ಣ ವ್ಯವಸ್ಥೆಯಂತೂ ಖಂಡಿತ ಅಲ್ಲ. ಮಾತ್ರವಲ್ಲ, ಮಾನವನು ತನ್ನ ವೈಯಕ್ತಿಕ ಜೀವನದಲ್ಲಿ ಸಚ್ಚರಿತನಾಗಿರುವುದರೊಂದಿಗೆ, ಅವನಲ್ಲಿ ಸಾಮೂಹಿಕತೆಯ ಪ್ರಜ್ಞೆಯೂ ಇರಬೇಕು ಮತ್ತು ಅವನು ಸಾಮೂಹಿಕ ಬೇಡಿಕೆಗಳನ್ನೂ ಪೂರ್ತೀಕರಿಸುವಂತಾಗಬೇಕು ಎಂಬುದೇ ಈ ತರಬೇತಿಯ ನೈಜ ಉದ್ದೇಶವಾಗಿದೆ. ಏಕೆಂದರೆ ಅದರ ಹೊರತು ಉನ್ನತ ಚಾರಿತ್ರ್ಯದ ಕಲ್ಪನೆಯೇ ಅಸಾಧ್ಯವಾಗಿದೆ. ವಾಸ್ತವದಲ್ಲಿ ತನ್ನ ವೈಯಕ್ತಿಕ ಜೀವನದಲ್ಲಿಯೂ ಅತ್ಯುತ್ತಮ ಮಾನವನಾಗಿ ಸಾಬೀತಾಗುವುದರ ಜತೆಗೆ ಸಾಮೂಹಿಕ ಜೀವನದಲ್ಲಿಯೂ ತನ್ನ ಜವಾಬ್ದಾರಿಕೆಗಳನ್ನು ನಿಭಾಯಿಸುವಂತಹವನೇ ಅಲ್ಲಾಹನು ಬಯಸುವ ಮಾನವನೆನಿಸಿಕೊಳ್ಳುತ್ತಾನೆ. ಅಲ್ಲಾಹ್ ಹೇಳುತ್ತಾನೆ, "ಮಾನವರಿಗೆ ಸಾದ್ಯಂತ ಸನ್ಮಾರ್ಗ, ಮಾರ್ಗದರ್ಶಕ ಮತ್ತು ಸತ್ಯಾಸತ್ಯಗಳಲ್ಲಿರುವ ಅಂತರವನ್ನು ಸುವ್ಯಕ್ತವಾಗಿ ತಿಳಿಸುವ ಶಿಕ್ಷಣಗಳನ್ನೊಳಗೊಂಡಿರುವ ಕುರ್‌ಆನ್ ಅವತೀರ್ಣಗೊಂಡ ತಿಂಗಳು ರಮಝಾನ್ ಆಗಿರುತ್ತದೆ. ಆದುದರಿಂದ ಯಾವನಾದರೂ ಈ ತಿಂಗಳನ್ನು ಹೊಂದಿದಾಗ ಅವನು ಆ ಸಂಪೂರ್ಣ ತಿಂಗಳ ಉಪವಾಸ ವ್ರತವನ್ನಾಚರಿಸಬೇಕು." (ಅಲ್ ಬಕರ: 185)

ಒಟ್ಟಿನಲ್ಲಿ ನಮ್ಮ ತರಬೇತಿಗಾಗಿ ರಮಝಾನ್ ತಿಂಗಳನ್ನು ಆಯ್ಕೆ ಮಾಡಲಾಗಿದೆ ಮತ್ತು ಅದರ ಸಂಬಂಧವನ್ನು ಪವಿತ್ರ ಕುರ್‌ಆನಿನೊಂದಿಗೆ ಸ್ಥಾಪಿಸಲಾಗಿದೆ. ಪವಿತ್ರ ಕುರ್‌ಆನ್ ಅವತೀರ್ಣದ ಉದ್ದೇಶವು ರಮಝಾನಿನ ಉಪವಾಸ ವ್ರತಗಳ ಉದ್ದೇಶಕ್ಕಿಂತ ಭಿನ್ನವೇನಲ್ಲ. ಪವಿತ್ರ ಕುರ್‌ಆನ್ ಮಾನವ ಜೀವನಕ್ಕೆ ಮಾರ್ಗದರ್ಶನವಾಗಿ ಅವತೀರ್ಣಗೊಂಡಿದೆ ಮತ್ತು ಜನರು ಆಧಾರ-ಪ್ರಮಾಣ, ದೃಷ್ಟಾಂತಗಳ ಬೆಳಕಿನಲ್ಲಿ ಸತ್ಯವನ್ನು ಕಂಡುಕೊಳ್ಳಲಿ ಹಾಗೂ ಅವರಲ್ಲಿ ಸತ್ಯ-ಮಿಥ್ಯಗಳ ನಡುವಿನ ಅಂತರವನ್ನು ಕಂಡುಕೊಳ್ಳುವ ಸಾಮರ್ಥ್ಯ ಬೆಳೆಯಲಿ ಎಂಬುದಕ್ಕಾಗಿ ಬಂದಿದೆ. ಅವರು ಎಂದೂ ಮೋಸ ಹೋಗಿ ಮಿಥ್ಯವನ್ನು ಸತ್ಯವೆಂದೂ ಸತ್ಯವನ್ನು ಮಿಥ್ಯವೆಂದೂ ಭಾವಿಸದಿರಲಿ; ವೈಫಲ್ಯಗಳು ಅವರನ್ನು ತಮ್ಮೆಡೆಗೆ ಸೆಳೆಯುವಲ್ಲಿ ವಿಫಲವಾಗುವಷ್ಟರ ಮಟ್ಟಿಗೆ ಅವರು ಉನ್ನತವಾಗಬೇಕು; ಅಂಧಕಾರವು ಅವರನ್ನು ತನ್ನಲ್ಲಿ ಲೀನವಾಗಿಸಲಾರದಷ್ಟು ಅವರು ಸತ್ಯದ ಬೆಳಕನ್ನು ತಮ್ಮದಾಗಿಸಿಕೊಳ್ಳಬೇಕು.

ಉಪವಾಸ ವ್ರತದ ಮೂಲಕ ರಮಝಾನ್ ತಿಂಗಳಿಗೆ ಒಂದು ಪ್ರತ್ಯೇಕತೆಯು

ದೊರೆತಿದೆ ಎಂಬುದೊಂದು ವಾಸ್ತವವಾಗಿದೆ. ಈ ಉಪವಾಸ ವ್ರತವು ಒಂದು ಪರಿಶುದ್ಧ ಆರಾಧನೆಯಾಗಿರುವುದರ ಜತೆಗೆ ನಮ್ಮ ನೈತಿಕ, ಆಧ್ಯಾತ್ಮಿಕ ತರಬೇತಿಯ ಒಂದು ಅತ್ಯುತ್ತಮ ಮಾಧ್ಯಮವೂ ಆಗಿದೆ. ಅಲ್ಲದೆ ಆತ್ಮನಿಯಂತ್ರಣ, ಕರ್ತವ್ಯ ಪಾಲನೆ ಮತ್ತು ಧರ್ಮನಿಷ್ಠೆಯ ಹೊರತು ಉನ್ನತ ತರಬೇತಿಯು ಒಂದು ಅರ್ಥ ಹೀನ ಪದವಾಗಿ ಉಳಿಯುತ್ತದೆ. ಹಾಗಾಗಿ ಉಪವಾಸ ವ್ರತದ ಮೂಲ ಉದ್ದೇಶವು ಧರ್ಮನಿಷ್ಠೆಯಾಗಿದೆ ಎಂಬುದು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿದೆ,

"ಓ ಸತ್ಯವಿಶ್ವಾಸಿಗಳೇ, ಗತ ಪ್ರವಾದಿಗಳ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದ್ದಂತೆಯೇ ನಿಮ್ಮ ಮೇಲೂ ಉಪವಾಸ ವ್ರತವನ್ನು ಕಡ್ಡಾಯಗೊಳಿಸಲಾಗಿದೆ. ಇದರಿಂದ ನಿಮ್ಮಲ್ಲಿ ತಕ್ವಾದ ಗುಣವಿಶೇಷವುಂಟಾಗುವುದು ಎಂದು ಆಶಿಸಲಾಗಿದೆ."

**(ಅಲ್ ಬಕರ: 183)**

ತಕ್ವಾ ಎಂದರೆ ಹೊಣೆಗಾರಿಕೆಯ ಪ್ರಜ್ಞೆ, ಆತ್ಮನಿಯಂತ್ರಣ, ದೇವನಿಷ್ಠೆ, ದೊಡ್ಡ ವಾಸ್ತವಿಕತೆಯ ಮುಂದೆ ಸಣ್ಣ ವಸ್ತುಗಳ ಕಡೆಗಣನೆ ಎಂದಾಗಿದೆ. ಅದೇ ವೇಳೆ, ಚಿತ್ತಾಕಾಂಕ್ಷೆಯ ದಾಸನಾಗಿರುವ ಮಾನವನು ಅಲ್ಲಾಹನ ಶ್ರೇಷ್ಠತೆ ಮತ್ತು ಹಿರಿಮೆಯನ್ನೂ ಅರಿಯಲಾರ, ಜೀವನದ ಉನ್ನತ ಮೌಲ್ಯಗಳನ್ನೂ ಅರಿಯಲಾರ ಹಾಗೂ ದೇವಮಾರ್ಗದಲ್ಲಿ ನಡೆಯಲೂ ಅವನಿಂದ ಸಾಧ್ಯವಾಗಲಾರದು.

ಆಹಾರ–ಪಾನೀಯ ಸೇವನೆ ಮತ್ತು ಲೈಂಗಿಕೇಚ್ಛೆಯ ಈಡೇರಿಕೆಯೇ ಜೀವನವಲ್ಲ, ಬದಲಾಗಿ ಅವುಗಳ ಹೊರತೂ ಕೆಲವು ಉನ್ನತವಾದ ವಾಸ್ತವಿಕತೆಗಳಿವೆ; ಅವೇ ಜೀವನದ ಮೂಲ ಬಂಡವಾಳಗಳಾಗಿವೆ ಎಂಬ ವಾಸ್ತವಿಕತೆಯನ್ನು ತಿಳಿಸುವ ಪ್ರಾಯೋಗಿಕ ರೂಪವೇ ಉಪವಾಸ ವ್ರತ. ಉಪವಾಸ ವ್ರತವು ಮೇಲ್ನೋಟಕ್ಕೆ ವ್ಯಕ್ತಿಯು ಆಹಾರ–ಪಾನೀಯ ಸೇವನೆ ಮತ್ತು ಲೈಂಗಿಕೇಚ್ಛೆಯ ಈಡೇರಿಕೆಯಿಂದ ತನ್ನನ್ನು ತಡೆದಿರಿಸುವುದಾಗಿ ತೋರುತ್ತದೆಯಾದರೂ ಆಧ್ಯಾತ್ಮಿಕತೆಯ ನಿಟ್ಟಿನಲ್ಲಿ ನೋಡಿದರೆ, ಉಪವಾಸ ವ್ರತವು ವ್ಯಕ್ತಿಯು ತನ್ನ ಆಗ್ರಹಗಳ ಮೇಲೆ ಹತೋಟಿಯನ್ನು ಸಾಧಿಸುವುದು ಮತ್ತು ಧರ್ಮನಿಷ್ಠೆಯ ಜೀವನವನ್ನು ಗಳಿಸುವುದಾಗಿದೆ; ಅವನ ದೃಷ್ಟಿಗಳು ಕರ್ಮಶುದ್ಧವಾಗಿರಬೇಕು ಮತ್ತು ಅವನ ಜೀವನವು ಪರಿಶುದ್ಧತೆ ಮತ್ತು ದೇವನಿಷ್ಠೆಯ ಪ್ರತಿಬಿಂಬವಾಗಿರಬೇಕು. ಉಪವಾಸದ ಸ್ಥಿತಿಯಲ್ಲಿ ವ್ಯಕ್ತಿಯು ಆಹಾರ–ಪಾನೀಯ ಸೇವನೆ ಮತ್ತು ಲೈಂಗಿಕೇಚ್ಛೆಯ ಈಡೇರಿಕೆಯಿಂದ ದೂರವಿರುವುದೆಂಬುದು ಉಪವಾಸ ವ್ರತದ ಅರ್ಥವಾಗಿದೆ ಎಂದಾದರೆ, ಪಾಪ ಕಾರ್ಯಗಳು ಮತ್ತು ಅಪ್ರಿಯ ಕಾರ್ಯಗಳಿಂದ ಎಲ್ಲ ಸಂದರ್ಭಗಳಲ್ಲೂ ದೂರವಿರಬೇಕು ಎಂದು ಅರ್ಥವಾಗುತ್ತದೆ.

ಉಪವಾಸ ಎಂಬುದು ತನ್ನನ್ನು ಅಲ್ಲಾಹನಿಗಾಗಿ ಬಿಡುವು ಮಾಡಿಕೊಳ್ಳುವುದು ಮತ್ತು ಏಕನಿಷ್ಠನಾಗಿ ದೇವನೆಡೆಗೆ ಗಮನ ಹರಿಸುವುದರ ಹೆಸರಾಗಿದೆ. ಈ ಮಗ್ಗುಲಿನಿಂದ ನೋಡಿದರೆ, ಇಅ್‌ತಿಕಾಫ್ ಮತ್ತು ಉಪವಾಸ ವ್ರತದ ನಡುವೆ ಗಾಢ ಸಂಬಂಧ ಕಾಣಸಿಗುತ್ತದೆ. ಇದೇ ಕಾರಣದಿಂದಾಗಿ ಇಅ್‌ತಿಕಾಫ್‌ನ ಜತೆಗೆ ಉಪವಾಸ ವ್ರತಾಚರಿಸುವುದು ಅಗತ್ಯವೆಂದು ಸಾರಲಾಗಿದೆ. ಅಲ್ಲದೆ, ರಮಝಾನಿನ ಕೊನೆಯ ಹತ್ತು ದಿನಗಳಲ್ಲಿ ತಪಶ್ಚರ್ಯೆ ಕುಳಿತುಕೊಳ್ಳಲು ಶಿಫಾರಸ್ಸು ಮಾಡಲಾಗಿದೆ.

ಒಟ್ಟಿನಲ್ಲಿ, ರಮಝಾನಿನ ಆಧ್ಯಾತ್ಮಿಕತೆ ಮತ್ತು ಮಹತ್ವವು ವೈಯಕ್ತಿಕ ಮತ್ತು ಸಾಮೂಹಿಕ ಎರಡೂ ಮಗ್ಗುಲುಗಳಲ್ಲಿ ಕಾಣಸಿಗುತ್ತದೆ. ಅಲ್ಲಾಹನ ಸಂದೇಶ ವಾಹಕರ(ಸ) ವಚನಗಳಿಂದ ಈ ವಾಸ್ತವಿಕತೆಯು ಇನ್ನಷ್ಟು ವ್ಯಕ್ತಗೊಳ್ಳುತ್ತದೆ. ಇಲ್ಲಿ ನಾವು ಕೆಲವು ಪ್ರವಾದಿವಚನಗಳನ್ನು ಉಲ್ಲೇಖಿಸುತ್ತಿದ್ದೇವೆ.

ಅಲ್ಲಾಹನ ಸಂದೇಶವಾಹಕರು(ಸ) ರಮಝಾನ್ ಕುರಿತು "ಅದು ಸಹನೆಯ ಮಾಸವಾಗಿದೆ" ಎಂದು ಹೇಳಿದ್ದಾರೆ.

ರಮಝಾನಿನ ಸಮೃದ್ಧಿಗಳಿಂದ ಸಂಪೂರ್ಣ ಪ್ರಯೋಜನವನ್ನು ಪಡೆಯಲು ಬಯಸುವ ಮತ್ತು ರಮಝಾನಿನ ಶಿಷ್ಟಾಚಾರಗಳನ್ನು ಪಾಲಿಸುವ ಮಂದಿಯನ್ನು ಈ ತಿಂಗಳು ಒಳಿತು ಮತ್ತು ಸಮೃದ್ಧಿಯಿಂದ ಸಂಪನ್ನಗೊಳಿಸುತ್ತದೆ. ಆದ್ದರಿಂದಲೇ ಅಲ್ಲಾಹನ ಸಂದೇಶವಾಹಕರು(ಸ) ಹೀಗೆ ಹೇಳಿರುವರು, "ಈ (ರಮಝಾನ್) ತಿಂಗಳ ಮೊದಲ ಭಾಗವು ಕರುಣೆ, ಮಧ್ಯದ ಭಾಗವು ಕ್ಷಮೆ ಮತ್ತು ಕೊನೆಯ ಭಾಗವು (ನರಕದ) ಬೆಂಕಿಯಿಂದ ರಕ್ಷಣೆಯಾಗಿದೆ." (ಬೈಹಕೀ)

ಅಂದರೆ, ನಮ್ಮ ವೈಯಕ್ತಿಕ ಜೀವನದಲ್ಲಿ ರಮಝಾನಿಗೆ ಎಷ್ಟು ಮಹತ್ವವಿದೆ ಎಂಬುದನ್ನು ಈ ಹದೀಸ್‌ನಿಂದ ತಿಳಿದುಕೊಳ್ಳಬಹುದಾಗಿದೆ.

ರಮಝಾನ್ ತಿಂಗಳಲ್ಲಿ ಸಾಮೂಹಿಕತೆಯು ಸಂಪೂರ್ಣ ವೈಭವದೊಂದಿಗೆ ಕಾಣಸಿಗುತ್ತದೆ. ಎಲ್ಲ ವಿಶ್ವಾಸಿಗಳೂ ಏಕಕಾಲಕ್ಕೆ ಉಪವಾಸ ವ್ರತಾಚರಿಸುತ್ತಾರೆ ಮತ್ತು ಹೆಚ್ಚೆಚ್ಚು ಆರಾಧನೆ, ಸತ್ಕರ್ಮಗಳಲ್ಲಿ ತಲ್ಲೀನರಾಗುತ್ತಾರೆ. ಇದರಿಂದಾಗಿ ಸಮಾಜದಲ್ಲಿ ಒಳಿತು ಮತ್ತು ಆಧ್ಯಾತ್ಮಿಕತೆಯ ಒಂದು ಆಹ್ಲಾದಕರ ವಾತಾವರಣವು ಸೃಷ್ಟಿಯಾಗುತ್ತದೆ. ಅದು ಹೃದಯಗಳ ಮೇಲೆ ಗಾಢ ಪರಿಣಾಮವನ್ನು ಬೀರುತ್ತದೆ.

ಸಾಮಾನ್ಯ ಸ್ಥಿತಿಯಲ್ಲಿ ಜನರಿಗೆ ಪರಸ್ಪರರ ಸಂಕಷ್ಟ ಮತ್ತು ಹಸಿವಿನ ಅರಿವು ಬಹಳ ಕಡಿಮೆಯೇ ಆಗುವುದು. ಆದರೆ ಉಪವಾಸ ವ್ರತದ ಸ್ಥಿತಿಯಲ್ಲಿನ ಹಸಿವು, ದಾಹದ ಪ್ರಾಯೋಗಿಕ ಅನುಭವವುಂಟಾಗುತ್ತದೆ. ಅದು ಒಬ್ಬ ವ್ಯಕ್ತಿಯಲ್ಲಿ

ಬಡವರನ್ನು, ನಿರ್ಗತಿಕರನ್ನು ಮತ್ತು ಅವಶ್ಯಾರ್ಥಿಗಳನ್ನು ಕಡೆಗಣಿಸದಿರಲು ಕಲಿಸುತ್ತದೆ. ಜತೆಗೆ ಅವರೊಡನೆ ಸಹಾನುಭೂತಿಯೊಂದಿಗೆ ವರ್ತಿಸಲು ಅವರ ಸಂಕಷ್ಟಗಳನ್ನು ದೂರೀಕರಿಸಲು ಪ್ರಯತ್ನಿಸುವ ಪ್ರಜ್ಞೆಯನ್ನು ಬೆಳೆಸುತ್ತದೆ. ಸ್ವತಃ ಅಲ್ಲಾಹನ ಸಂದೇಶವಾಹಕರು(ಸ) ಈ ತಿಂಗಳಲ್ಲಿ ಅತ್ಯಂತ ಉದಾರಿಯಾಗುತ್ತಿದ್ದರು.

ಅಲ್ಲಾಹನ ಸಂದೇಶವಾಹಕರು(ಸ) ರಮಝಾನ್ ಕುರಿತು ಹೀಗೆ ಹೇಳಿದ್ದಾರೆ, "ಇದು ಸಹಾನುಭೂತಿಯ ಮಾಸವಾಗಿದೆ." (ಬೈಹಕಿ)

ಅಂದರೆ ಉಪವಾಸ ವ್ರತದ ಸ್ಥಿತಿಯಲ್ಲಿ ತನ್ನ ಸಹೋದರರ ಪಾಲಿಗೆ ಸಹಾನುಭೂತಿಯ ಭಾವನೆಯು ಬಹಳ ಹೆಚ್ಚಾಗಬೇಕಾಗಿದೆ.

ಅಲ್ಲಾಹನ ಸಂದೇಶವಾಹಕರು(ಸ) ಹೇಳುತ್ತಾರೆ, "ಒಬ್ಬ ಉಪವಾಸಿಗನಿಗೆ ಹೊಟ್ಟೆ ತುಂಬಾ ಉಣಿಸಿದರೆ, ಅಲ್ಲಾಹ್ ಅವನ ದಾಹವನ್ನು ನನ್ನ (ಕೌಸರ್) ಕೊಳದಿಂದ ತಣಿಸುವನು. ಅದರ ನಂತರ ಅವನಿಗೆ ಎಂದೂ ದಾಹವಾಗಲಾರದು. ಎಲ್ಲಿಯ ವರೆಗೆಂದರೆ ಅವನು ಸ್ವರ್ಗ ಪ್ರವೇಶಿಸುವನು." (ಬೈಹಕಿ)

ಅಲ್ಲಾಹನ ಸಂದೇಶವಾಹಕರು(ಸ) ಹೇಳುತ್ತಾರೆ, "ರಮಝಾನ್ ತಿಂಗಳಲ್ಲಿ ಯಾರಾದರೂ ತನ್ನ ಸೇವಕನ ಕೆಲಸವನ್ನು ಕಡಿತಗೊಳಿಸಿದರೆ, ಅಲ್ಲಾಹ್ ಅವನನ್ನು (ನರಕದ) ಬೆಂಕಿಯಿಂದ ಮುಕ್ತಿಯನ್ನು ನೀಡುವನು." (ಇಬ್ನು ಖುಝೈಮಃ)

ವ್ಯಕ್ತಿಯು ನಿಜವಾಗಿಯೂ ರಮಝಾನ್ ತಿಂಗಳಿನಿಂದ ಪ್ರಯೋಜನವನ್ನು ಪಡೆದನೆಂದರೆ, ಅದು ಅವನನ್ನು ಸದಾ ತನ್ನ ಹೊಣೆಗಾರಿಕೆಯ ಪ್ರಜ್ಞೆಯನ್ನು ಹೊಂದಿರುವಂತಹ ಸ್ಥಾನಕ್ಕೆ ಕೊಂಡೊಯ್ಯುತ್ತದೆ. ಬಳಿಕ ಅವನ ಬೆಳಗು-ಬೈಗುಗಳು ಅಲಕ್ಷ್ಯ ಮತ್ತು ಆಲಸ್ಯದಿಂದ ಕಳೆದು ಹೋಗುವುದಿಲ್ಲ. ಹೀಗೆ ಅವನು ಅಲ್ಲಾಹನ ಸಾಮಿಪ್ಯವನ್ನು ಗಳಿಸುವಲ್ಲಿ ಯಶಸ್ವಿಯಾಗುತ್ತಾನೆ. ತತ್ಪರಿಣಾಮವಾಗಿ ಅವನಿಗಿಂತ ದೊಡ್ಡ ಮಾನವ ಹಕ್ಕುಗಳ ಪ್ರತಿಪಾದಕ ಮತ್ತು ಜನಸೇವಕ ಬೇರೆ ಇರಲಾರನು.



# ಈದುಲ್ ಫಿತ್ರ್ ಯಾಕೆ?

ಹಬ್ಬಗಳ ಸಂಬಂಧವು ಮಾನವನ ಭಾವನೆಗಳೊಂದಿಗೆ ವಿಶೇಷತಃ ಅವನ ಸಂತೋಷದ ಭಾವನೆಯೊಂದಿಗೆ ಜೋಡಿಕೊಂಡಿರುತ್ತದೆ. ಈ ಭಾವನೆಯು ಎಷ್ಟು ಗಾಢ ಮತ್ತು ಅರ್ಥಪೂರ್ಣವಾಗಿರುವುದೋ ಅಷ್ಟೇ ಹಬ್ಬದ ಮೌಲ್ಯವೂ ಹೆಚ್ಚುತ್ತದೆ. ಸಂತೋಷ ಮತ್ತು ಆನಂದದ ಹೊರತು ಯಾವುದೇ ಸಮಾಜವು ಜೀವಂತವಿರಲಾರದು. ಆದ್ದರಿಂದ ಹಬ್ಬ ಮತ್ತು ಸಾಮಾಜಿಕ ಜೀವನದ ನಡುವೆ ಅವಿನಾಭಾವ ಸಂಬಂಧವಿರುವುದನ್ನು ಅಂಗೀಕರಿಸಲಾಗಿದೆ.

ಒಂದು ಸಂತೋಷವು ಓರ್ವ ವ್ಯಕ್ತಿಗೆ ಸಂಬಂಧಿಸಿದುದಾಗಿರುತ್ತದೆ. ಇತರರಿಗೆ ಅದರೊಂದಿಗೆ ಯಾವುದೇ ಸಂಬಂಧವಿರುವುದಿಲ್ಲ. ಇನ್ನೊಂದು ಸಂತೋಷವು ಸಮಾಜದ ಹೆಚ್ಚಿನ ಜನರಿಗೆ ಸಮಾನವಾಗಿ ಸಂಬಂಧಿಸಿರುವಂತಹುದಾಗಿರುತ್ತದೆ. ಹಬ್ಬವು ಈ ಎರಡನೆಯ ಸಂತೋಷಕ್ಕೆ ಸಂಬಂಧಿಸಿದುದಾಗಿದೆ. ಇದಕ್ಕೆ ಪ್ರಬಲ ಮತ್ತು ಸ್ಥಿರವಾದ ರೂಪವನ್ನು ನೀಡಲು ಹಬ್ಬಗಳನ್ನು ಆವಿಷ್ಕರಿಸಲಾಗಿದೆ. ಹಾಗಾಗಿ ಹಬ್ಬದಲ್ಲಿ ಸಮಾನ ಭಾವನೆಗಳು ಮತ್ತು ಸಮಾನ ಸಂತೋಷಗಳನ್ನು ವ್ಯಕ್ತಪಡಿಸಲಾಗುತ್ತದೆ. ಎಲ್ಲರೂ ಸೇರಿ ಸಂತೋಷಾಚರಿಸುತ್ತಾರೆ. ಇದು ಜನರಲ್ಲಿ ಸಾಮೂಹಿಕ ಪ್ರಜ್ಞೆಯನ್ನು ಬೆಳೆಸುತ್ತದೆ ಮತ್ತು ಹಬ್ಬವು ಅದಕ್ಕೆ ಆಗಾಗ ತಾಜಾತನವನ್ನು ನೀಡುತ್ತಿರುತ್ತದೆ.

ಇನ್ನು ಹಬ್ಬದ ರೂಪದಲ್ಲಿ ಅನುಭವಕ್ಕೆ ಬರುವ ಭಾವನೆಗಳು ಒಂದೋ ಓರ್ವ ವ್ಯಕ್ತಿಗೆ ಸಂಬಂಧಿಸಿರುತ್ತದೆ, ಇಲ್ಲವೇ ಒಂದು ನಿರ್ದಿಷ್ಟ ರಾಷ್ಟ್ರ ಮತ್ತು ಕಾಲ ಅಥವಾ ಯಾವುದಾದರೂ ದಿನಾಂಕಕ್ಕೆ ಸಂಬಂಧಿಸಿರುತ್ತದೆ. ಇನ್ನು ಕೆಲವದರ ಹಿಂದೆ ಊಹೆ ಅಥವಾ ಸಂಪ್ರದಾಯವು ಕೆಲಸ ಮಾಡಿರುತ್ತದೆ.

ಇಸ್ಲಾಮ್ ಒಂದು ದೈವಿಕ ಮತ್ತು ಜಾಗತಿಕ ಧರ್ಮವಾಗಿದೆ. ಆದ್ದರಿಂದ ಅದರ ಇತರ ಆದೇಶಗಳಂತೆಯೇ ಅದರ ಹಬ್ಬಗಳಲ್ಲಿಯೂ ದೈವಿಕ ಮತ್ತು

ಜಾಗತಿಕ ವೈಭವವು ಎದ್ದು ಕಾಣುತ್ತದೆ. ಇಸ್ಲಾಮ್ ಯಾವುದೇ ಪಕ್ಷಪಾತ ಅಥವಾ ಸಂಕುಚಿತತೆಯಿಂದ ಕೂಡಿದ ದೃಷ್ಟಿಕೋನವನ್ನು ಬೆಂಬಲಿಸುವುದಿಲ್ಲ. ಬದಲಾಗಿ ಅದು ಸಕಲ ಮಾನವರಿಗೆ ಸಮಾನ ಸ್ಥಾನಮಾನವನ್ನು ಹೊಂದಿರುವ ಸಂಪ್ರದಾಯ ಮತ್ತು ಭಾವನೆಗಳಿಗೆ ಮಹತ್ವವನ್ನು ಕಲ್ಪಿಸುತ್ತದೆ.

ಈದುಲ್ ಫಿತ್ರ್ – ಇಸ್ಲಾಮಿನ ಪ್ರಮುಖ ಹಬ್ಬವಾಗಿದೆ. ಇದು ಜನರು ರಮಝಾನ್ ತಿಂಗಳ ಹಗಲಲ್ಲಿ ಉಪವಾಸ ವ್ರತ ಮತ್ತು ರಾತ್ರಿ ತರಾವೀಹ್, ಕುರ್‌ಆನ್ ಪಠಣ ಇತ್ಯಾದಿ ಪ್ರಮುಖ ತರಬೇತಿ ಹಾಗೂ ಆಧ್ಯಾತ್ಮಿಕ ಕಾರ್ಯಕ್ರಮಗಳನ್ನು ನಡೆಸಿ ವಿರಮಿಸುವಾಗ ಆಚರಿಸುವ ಹಬ್ಬವಾಗಿದೆ.

ರಮಝಾನಿನ ಉಪವಾಸ ವ್ರತಗಳಿಗೆ ಬಹಳ ಪ್ರಾಧಾನ್ಯತೆ ಇದೆ ಎಂಬುದು ಪವಿತ್ರ ಕುರ್‌ಆನ್ ಮೂಲಕ ತಿಳಿದು ಬರುತ್ತದೆ. ಈ ಉಪವಾಸ ವ್ರತಗಳನ್ನು ಸಂಪೂರ್ಣ ಪ್ರಜ್ಞೆಯೊಂದಿಗೆ ಆಚರಿಸುವುದು ಸಾಮಾನ್ಯವಾಗಿ ಜನರ ಕಲ್ಪನೆಗೆ ನಿಲುಕದಂತಹುದಾಗಿದೆ. ಉಪವಾಸ ವ್ರತದ ಮೂಲ ಉದ್ದೇಶವು ಧರ್ಮನಿಷ್ಠೆ ಗಳಿಸುವುದಾಗಿದೆ ಎಂದು ಪವಿತ್ರ ಕುರ್‌ಆನ್ ತಿಳಿಸುತ್ತದೆ. ಅಂದರೆ ಉಪವಾಸದ ಮೂಲಕ ವ್ಯಕ್ತಿಯಲ್ಲಿ ಧರ್ಮನಿಷ್ಠೆ ಮತ್ತು ಅಲ್ಲಾಹನ ಮಹಾನತೆಯ ಭಾವನೆಯು ಬೆಳೆದು ಬರಬೇಕೆಂಬುದಾಗಿದೆ. ಅಂತೆಯೇ ಎಲ್ಲ ರೀತಿಯ ಕೆಡುಕಿನಿಂದ ದೂರ ಉಳಿಯುತ್ತಾ ಹೊಣೆಗಾರಿಕೆಯಿಂದ ಕೂಡಿದ ಜೀವನವನ್ನು ಬಾಳಲು ಅರ್ಹ ನಾಗುವುದಾಗಿದೆ. ಜತೆಗೆ ಈ ತಿಂಗಳಲ್ಲಿ ಅವತೀರ್ಣಗೊಂಡಿರುವ ಮತ್ತು ತನ್ನಲ್ಲಿ ಸಕಲ ಮಾನವರಿಗೆ ಮಾರ್ಗದರ್ಶನವನ್ನು ಹೊಂದಿರುವ ಪವಿತ್ರ ಕುರ್‌ಆನಿನ ಹಕ್ಕನ್ನು ಸಂದಾಯ ಮಾಡುವುದಾಗಿದೆ. ಅದು ಫುರ್ಕಾನ್ ಕೂಡ ಆಗಿದೆ. ಅದರ ಮೂಲಕ ವ್ಯಕ್ತಿಯು ಸತ್ಯ ಮತ್ತು ಮಿಥ್ಯಗಳ ನಡುವಿನ ಅಂತರ ವನ್ನು ತಿಳಿದು ಕೊಳ್ಳಬಲ್ಲನು. ಪವಿತ್ರ ಕುರ್‌ಆನಿನಲ್ಲಿ ಇರುವಂತಹ ಆಧಾರ ಪ್ರಮಾಣಗಳೊಡಗೂಡಿದ ಮಾರ್ಗದರ್ಶನದಂತೆ ಬಾಳಿದವನು ಎಂದೂ ಪಥ ಭ್ರಷ್ಟನಾಗಲಾರನು. ಉಪವಾಸ ವ್ರತಾಚರಿಸುವ ಮೂಲಕ ವ್ಯಕ್ತಿಯು ವಸ್ತುತಃ ಅಲ್ಲಾಹನ ಮಹಾನತೆಯನ್ನು ಅಂಗೀಕರಿಸುತ್ತಾನೆ. ಅಲ್ಲಾಹನ ಇಚ್ಛೆಯ ವಿರುದ್ಧ ಅವನ ಮಟ್ಟಿಗೆ ಆಹಾರ–ಪಾನೀಯ ಸೇವನೆಯೂ ವರ್ಜ್ಯವಾಗುತ್ತದೆ.

ಅಲ್ಲಾಹನ ಮಹಾನತೆಯನ್ನು ಅಂಗೀಕರಿಸದಿರುವುದು ಕೃತಘ್ನತೆಯಾಗಿದೆ. ಈ ಗ್ರಂಥದ ಅನುಗ್ರಹಗಳನ್ನು ಮತ್ತು ಪ್ರತಿಫಲಗಳನ್ನು ಗಳಿಸಿದ ಬಳಿಕ ಕೃತಘ್ನತೆ ತೋರಬಾರದು, ಬದಲಾಗಿ ಕೃತಜ್ಞತೆಯ ಧೋರಣೆ ಕೈಗೊಳ್ಳಬೇಕೆಂದು ಅಲ್ಲಾಹ್ ಹೇಳುತ್ತಾನೆ. ಈ ಕೃತಜ್ಞತೆಯು ಕೇವಲ ಮಾತಿಗೆ ಸೀಮಿತವಾಗಿರಬಾರದು,

ಬದಲಾಗಿ ಕೌಟುಂಬಿಕ, ವ್ಯಾವಹಾರಿಕ, ರಾಜಕೀಯ, ಅಂತರ್ರಾಷ್ಟ್ರೀಯ ವಿಷಯಗಳೇ ಮೊದಲಾದ ಜೀವನದ ಸಕಲ ವ್ಯವಹಾರಗಳಲ್ಲೂ ಅಲ್ಲಾಹನ ಮಾರ್ಗದರ್ಶನವನ್ನು ಪಾಲಿಸಬೇಕು ಮತ್ತು ತಮ್ಮ ಹೃದಯದಲ್ಲಿ ಯಾವುದೇ ರೀತಿಯ ಸಂಕೀರ್ಣತೆಯನ್ನು ಇರಿಸಬಾರದು. ಈ ರೀತಿಯ ಮುಕ್ತವಾತಾವರಣದಲ್ಲಿ ಬಾಳುವವರು ಅಲ್ಲಾಹನಿಗೆ ಅಪಾರವಾಗಿ ಕೃತಜ್ಞತೆಯನ್ನು ಸಲ್ಲಿಸುತ್ತಾರೆ ಮತ್ತು ಈ ಕೃತಜ್ಞತಾಭಾವವು ಅಲ್ಲಾಹನ ಅನುಗ್ರಹಗಳು ಮತ್ತು ಸಾಮಿಪ್ಯದ ಜತೆ ಹೆಚ್ಚುತ್ತಾ ಹೋಗುವುದು. ಈ ಭಾವನೆಯು ಎಂದೂ ತಣ್ಣಗಾಗಲಾರದು. ಏಕೆಂದರೆ ಇದೆಲ್ಲವೂ ಎಂದೂ ಕೊನೆಗೊಳ್ಳದಂತಹ ಅನುಗ್ರಹಗಳನ್ನು ನೀಡುವವನ ಕೊಡುಗೆಗಳಾಗಿರುವುದು.

ರಮಝಾನಿನಲ್ಲಾಗುವ ತರಬೇತಿಯಿಂದಾಗಿ, ವ್ಯಕ್ತಿಯ ಆರಾಧನೆಗಳ ಮೂಲಕ ಅವನ ಪ್ರಜ್ಞೆಯಲ್ಲಿ ಪರಿಶುದ್ಧತೆಯುಂಟಾಗುತ್ತದೆ. ಅದರಿಂದ ಅವನಲ್ಲಾಗುವ ವ್ಯಕ್ತಿತ್ವ ನಿರ್ಮಾಣ, ಅವನ ಚಾರಿತ್ರ್ಯಕ್ಕೆ ಒದಗುವ ಶಕ್ತಿ ಮತ್ತು ಅವನ ಆತ್ಮಕ್ಕೆ ದೊರಕುವ ಪಕ್ವತೆಯು ಐಹಿಕವಾದ ಸಾವಿರಾರು ಆನಂದಗಳಿಗಿಂತ ಮಿಗಿಲಾಗಿರುತ್ತದೆ.

ಗಾಳಿ, ನೀರು, ಧಾನ್ಯ, ಜೀವನಾಧಾರ ಮತ್ತಿತರ ಸಂಪನ್ಮೂಲಗಳು ನಿಶ್ಚಯ ವಾಗಿಯೂ ಅಲ್ಲಾಹನ ಅನುಗ್ರಹ ಮತ್ತು ಅವನ ಕೊಡುಗೆಗಳಾಗಿವೆ. ಆದರೆ ಈ ಅನುಗ್ರಹಗಳೆಲ್ಲವೂ ಮಾನವನ ದೈಹಿಕ ಅಸ್ತಿತ್ವಕ್ಕಾಗಿರುತ್ತದೆ ಎಂಬುದನ್ನು ನಾವೆಲ್ಲ ಬಲ್ಲೆವು. ಆದರೆ ಕುರ್‌ಆನ್ ಮತ್ತು ಅದರಿಂದ ದೊರೆಯುವ ಮಾರ್ಗ ದರ್ಶನಗಳು ಮಾನವನ ಆತ್ಮ ಮತ್ತು ಅವನ ಚಾರಿತ್ರ್ಯಕ್ಕೆ ದೊರೆಯುವ ಅನುಗ್ರಹ ಗಳಾಗಿವೆ. ಇವು ಅಲ್ಲಾಹನ ಕಡೆಯಿಂದ ಮಾನವನಿಗೆ ದೊರೆಯುವ ಮಹತ್ ಕೊಡುಗೆಗಳಾಗಿವೆ ಎಂಬುದು ಒಂದು ವಾಸ್ತವ. ಇದರ ಕಾರಣವಾಗಿ ಒಂದು ಪರಿಶುದ್ಧ ಜೀವನವು ದೊರೆಯುವಾಗ ಈ ಅನುಗ್ರಹದ ಸಂಪೂರ್ಣ ಪ್ರಜ್ಞೆಯು ಮಾನವನಲ್ಲಿ ಬೆಳೆಯುತ್ತದೆ. ಹೀಗೆ ಅಲ್ಲಾಹನ ನೀತಿ-ನಿಯಮಗಳಿಂದ ಮಾನವೀಯ ಸಂಸ್ಕೃತಿಯ ನಿರ್ಮಾಣವಾಗುತ್ತದೆ, ಜಗತ್ತಿನಲ್ಲಿ ಶಾಂತಿ-ಸಮಾಧಾನ ನೆಲೆಸುತ್ತದೆ, ಹೃದಯಗಳಿಗೆ ತೃಪ್ತಿಯೊದಗುತ್ತದೆ ಮತ್ತು ಅಪೇಕ್ಷಿತರ ಬೇಡಿಕೆಗಳ ಈಡೇರಿಕೆಯ ವ್ಯವಸ್ಥೆಯಾಗುತ್ತದೆ. ಒಟ್ಟಿನಲ್ಲಿ ನಮಗೆ ದೊರೆ ತಿರುವ ವಸ್ತುವು ಅಸಾಮಾನ್ಯವಾಗಿದೆ ಎಂಬ ಪ್ರಜ್ಞೆಯನ್ನು 'ಈದುಲ್ ಫಿತ್ರ್' ಎಂಬ ಹಬ್ಬವು ನಮ್ಮಲ್ಲಿ ಬೆಳೆಸುತ್ತದೆ. ಇದು ಸಮಾನ ಸಂತೋಷ ಮತ್ತು ಸಮಾನ ಭಾವನೆಗಳನ್ನು ವ್ಯಕ್ತಪಡಿಸುವ ಹಬ್ಬವಾಗಿದೆ. ಹಾಗಾಗಿಯೇ ಜಗತ್ತಿನ ಎಲ್ಲ ಮುಸ್ಲಿಮರೂ ಇದನ್ನು ಏಕಕಾಲದಲ್ಲಿ ಆಚರಿಸುತ್ತಾರೆ. ಅವರು ಯಾವುದೇ ವರ್ಣ, ಕುಲ, ಗೋತ್ರಕ್ಕೆ ಸಂಬಂಧಿಸಿದರೂ ಸರಿಯೆ.

ಸಂತೋಷವನ್ನು ಆಚರಿಸುವ ಸುಸಂಸ್ಕೃತ ವಿಧಾನವನ್ನೇ 'ಈದುಲ್

ಫಿತ್ರ್‌ನಲ್ಲಿ ಅನುಸರಿಸಲು ಆದೇಶಿಸಲಾಗಿದೆ. ನಮ್ಮನ್ನು ಅಸಂಸ್ಕೃತ ಮತ್ತು ಅಸಭ್ಯ ವಿಧಾನಗಳನ್ನು ಅನುಸರಿಸುವುದರಿಂದ ತಡೆಯಲಾಗಿದೆ. ಉದಾಹರಣೆಗೆ: ಅಶ್ಲೀಲ ಗಾಯನ, ನೃತ್ಯ, ಮದ್ಯಪಾನ, ಗುಲ್ಲು-ಗದ್ದಲ ಇತ್ಯಾದಿ. ಒಟ್ಟಿನಲ್ಲಿ ದುರಾಚಾರ, ಅಶ್ಲೀಲತೆ, ಅಸಭ್ಯತೆ ಇತ್ಯಾದಿಗಳಿಂದ ಮುಕ್ತವಾಗಿರುವಂತಹ ಸಂಪ್ರದಾಯವನ್ನೇ ಜಾರಿಗೊಳಿಸಲಾಗಿದೆ; ಸಂತೋಷ, ಮನರಂಜನೆಯನ್ನು ಸಂಸ್ಕೃತಿಯ ಪರಿಧಿಯಲ್ಲಿರಿಸಲಾಗಿದೆ ಮತ್ತು ಹಬ್ಬಾಚರಣೆಯಲ್ಲಿ ಗಂಭೀರತೆ ಮತ್ತು ಘನತೆಯನ್ನು ಎಂದೂ ಕೈ ಬಿಡಬಾರದು ಎಂದು ತಾಕೀತು ಮಾಡಲಾಗಿದೆ.

'ಈದುಲ್ ಫಿತ್ರ್' ಎಂಬುದು ಒಂದು ಆರಾಧನೆಯನ್ನೊಳಗೊಂಡ ಹಬ್ಬವಾಗಿದೆ. ಅಲ್ಲಾಹನ ಸ್ತುತಿ, ಕೀರ್ತನೆ, ತಕ್ಬೀರ್ ಇದರಲ್ಲಿ ಸೇರಿದೆ. ಇದು ವಸ್ತುತಃ ಕೃತಜ್ಞತೆಯನ್ನು ಪ್ರಕಟಿಸುವ ಹಬ್ಬವಾಗಿದೆ. ಈದುಲ್ ಫಿತ್ರ್‌ನ ಸಂದರ್ಭದಲ್ಲಿ ಈ ವಿಷಯವು ಸ್ಪಷ್ಟವಾಗಿ ಗೋಚರಿಸುತ್ತದೆ.

ಈ ಹಬ್ಬದ ಸಂದರ್ಭದಲ್ಲಿ ಸ್ತ್ರೀ-ಪುರುಷರು, ಮಕ್ಕಳು-ಹಿರಿಯರು ಎಲ್ಲರೂ ಬೆಳಗಾತ ಸ್ನಾನ ಮಾಡುತ್ತಾರೆ, ತಮ್ಮ ಬಳಿ ಇರುವ ಉತ್ತಮ ವಸ್ತ್ರ ಧರಿಸುತ್ತಾರೆ, ಸುಗಂಧ ಹಚ್ಚುತ್ತಾರೆ. ಈ ಸಂತೋಷದ ಸಂದರ್ಭದಲ್ಲಿ ಬಡವರು ಮತ್ತು ನಿರ್ಗತಿಕರನ್ನು ಎಂದಿಗೂ ಕಡೆಗಣಿಸಬಾರದು ಎಂದು ತಾಕೀತು ಮಾಡಲಾಗಿದೆ. ಅದಕ್ಕಾಗಿ ಫಿತ್ರ್ ಝಕಾತನ್ನು ವಾಜಿಬ್‌ಗೊಳಿಸಲಾಗಿದೆ. ಹೀಗೆ ಸಮಾಜದಲ್ಲಿ ಅಂದು ಯಾರೂ ಹಸಿದಿರಬಾರದು ಎಂದು ಆಶಿಸಲಾಗುತ್ತದೆ.

ಎಲ್ಲರೂ ತಮ್ಮ ಕೇರಿಯಿಂದ ಹೊರಟು ಈದ್‌ಗಾಹ್‌ನಲ್ಲಿ ಸೇರಬೇಕು, ದಾರಿಯಲ್ಲಿ ತಕ್ಬೀರ್ ಹೇಳುತ್ತಾ (ಅಂದರೆ ಅಲ್ಲಾಹನ ಮಹಾನತೆಯನ್ನು ಕೊಂಡಾಡುತ್ತಾ) ಸಾಗಬೇಕು ಎಂದು ಆದೇಶಿಸಲಾಗಿದೆ. ಏಕೆಂದರೆ ಅಲ್ಲಾಹನ ಸಾಮಿಪ್ಯವೇ ಜೀವನದ ನಿಜವಾದ ಬಂಡವಾಳವಾಗಿದೆ. ಮಾತ್ರವಲ್ಲ, ನಮ್ಮ ಜೀವನ ಮತ್ತು ಸಂತೋಷದ ಮೂಲ ಸೆಲೆಯಾಗಿದೆ. ಅದೇ ರೀತಿ ಈದ್‌ಗಾಹ್‌ಗೆ ಒಂದು ದಾರಿಯಲ್ಲಿ ಹೋಗಿ, ಇನ್ನೊಂದು ದಾರಿಯಲ್ಲಿ ಮರಳಬೇಕು ಎಂದೂ ಆದೇಶಿಸಲಾಗಿದೆ. ಈ ಮೂಲಕ ಅಲ್ಲಾಹನ ಸ್ಮರಣೆಯಿಂದ ಎಲ್ಲ ಸ್ಥಳಗಳೂ ಬೆಳಗುವುವು.

ಈದ್‌ಗಾಹ್‌ನಲ್ಲಿ ಜನರು ಅಲ್ಲಾಹನ ಸನ್ನಿಧಿಯಲ್ಲಿ ಸಾಷ್ಟಾಂಗವೆರಗುವ ಮೂಲಕ ತಮ್ಮ ದಾಸ್ಯತನವನ್ನು ಪ್ರಕಟಿಸುವಾಗ ನಮ್ಮ ಸಂತೋಷವು ಇಮ್ಮಡಿಸುತ್ತದೆ ಎಂಬುದನ್ನು ಎಲ್ಲರೂ ಬಲ್ಲರು. ಎಲ್ಲಕ್ಕೂ ಮಿಗಿಲಾಗಿ, ಅಲ್ಲಾಹ್ ಮತ್ತು ಅವನ ದಾಸರ ನಡುವಿನ ಸಂಬಂಧವು ವ್ಯಕ್ತವಾಗುವ ಸಂದರ್ಭವೇ ಮಾನವನಿಗೆ ಅತಿ ಪ್ರಿಯವಾದ ಸಂದರ್ಭವಾಗಿದೆ. ಈ ಸ್ಥಿತಿಯು ರುಕೂಅ್ ಮತ್ತು ಸುಜೂದ್‌ನ

ಹೊರತು ಬೇರೆ ಇರಲಾರದು ಎಂಬುದು ಸ್ಪಷ್ಟ. ಅಲ್ಲಾಹ್ ಮತ್ತು ಅವನ ದಾಸನ ನಡುವೆ ಇರುವ ಸಂಬಂಧವು ವ್ಯಕ್ತವಾಗುವ ಈ ಸಂದರ್ಭವಿದೆಯಲ್ಲ, ಅದು ಅತಿ ಮನೋಹರವಾದುದಾಗಿದೆ. ಅಲ್ಲಾಹನ ಸನ್ನಿಧಿಯಲ್ಲಿ ಸಾಷ್ಟಾಂಗವೆರಗುವ ಸಂದರ್ಭವು ವಸ್ತುತಃ ಜೀವನದ ಅತಿ ಮೋಹಪರವಾದ ಸಂದರ್ಭವಾಗಿದೆ. ಆದ್ದರಿಂದ ಅಲ್ಲಾಹನ ಸನ್ನಿಧಿಯಲ್ಲಿ ಸಾಷ್ಟಾಂಗವೆರಗದೆ ಹಬ್ಬವನ್ನು ಆಚರಿಸಲಾಗದು. ಈ ಹಬ್ಬದಲ್ಲಿ ದೇವನ ದಾಸರ ಹಕ್ಕುಗಳನ್ನೂ ಗೌರವಿಸಲಾಗಿದೆ.

ಎಲ್ಲ ಮಾನವರೂ ಒಂದು ಕುಟುಂಬದ ಸ್ಥಾನವನ್ನು ಹೊಂದಿದ್ದಾರೆ ಎಂಬುದನ್ನು ಈ ಹಬ್ಬವು ವ್ಯಕ್ತಪಡಿಸುತ್ತದೆ. ಜನರ ನಡುವೆ ಪರಸ್ಪರ ಸಹಾನುಭೂತಿ ಮತ್ತು ಹಿತಚಿಂತನೆಯ ಸಂಬಂಧವು ಬೆಳೆದು ಬರಬೇಕಾಗಿದೆ. ಈ ಹಬ್ಬವು ತನ್ನ ಬಾಹುಗಳಲ್ಲಿ ಸಕಲ ಮಾನವರನ್ನು ಬಾಚಿಕೊಳ್ಳುತ್ತದೆ. ಸಕಲ ಮಾನವರನ್ನು ಸಂತೋಷದಲ್ಲಿ ಪಾಲ್ಗೊಳ್ಳುವುದನ್ನು ಕಾಣವುದು ಇಸ್ಲಾಮೀ ಸ್ವಭಾವವಾಗಿದೆ. ಈದುಲ್ ಫಿತ್ರ್‌ನ ಮೂಲಕ ಇಸ್ಲಾಮಿನ ಪ್ರಾತಿನಿಧಿತ್ವವಾಗುತ್ತದೆ ಮತ್ತು ಅಜ್ಞಾನವು ನಿರಾಕರಿಸಲ್ಪಡುತ್ತದೆ. ಅದೇನಿದ್ದರೂ ನಾವು ಈದುಲ್ ಫಿತ್ರ್‌ನ ವಾಸ್ತವಿಕತೆ ಮತ್ತು ಅದರ ಅರ್ಥವನ್ನು ಅರಿತರೆ ಹೆಚ್ಚು ಉತ್ತಮ.

